( ಸ-ಗಾ-ರ ॥ ) —

**ನಕ್ತನ್ದಿವಂ ಭ್ರಮವಚಾಂಸಿ ಹಠಾದ್ವದನ್ತೀ**
**ನೀಲೋತ್ಪಲಾಕ್ಷ್ಯಭವದೇವ ಹಿ ಸಾಶ್ರುಧಾರಾ ।**
**ಭೃಙ್ಗಾವೃತಾಂ ಚ ಸರಸಾಂ ತುಲಸೀಂ ನ ದದ್ಯಾಃ!**
**ಕಿಂ ವೇದೃಶೀ ತವ ಕೃಪಾ? ಬತ! ಶುದ್ಧಶೀಲ ॥**

ತಾ॥ ರಾತ್ರಿ ಹಗಲೂ ಬಾಯಿಯಿಂದ "ತುಳಸಿ-ತುಳಸಿ" ಎಂದು ಅದನ್ನೇ ಹೇಳಿ ಕನವರಿಸುತ್ತ, ಕಣ್ಣುನೀರು ಸುರಿಸುತ್ತಿದ್ದಾಳೆ. ಹೀಗಿದ್ದಾಗ್ಯೂ ನೀವು ಭೃಂಗಾವೃತವಾಗಿ ರಮ್ಯವಾದ ನಿಮ್ಮ ತುಳಸಿಯನ್ನು ಇವಳಿಗೆ ಕೊಡುವುದಿಲ್ಲ. ಆಶ್ರಿತರ ವಿಷಯದಲ್ಲಿ ಶುದ್ಧಸ್ವಭಾವವುಳ್ಳ ನಿಮ್ಮ ಕೃಪಾತಿಶಯವು ಇಂತಹುದೇ? (ಹೀಗೆಯೇ ನಿಮ್ಮ ಕೃಪಾಳುತ್ವವಿರುವುದು!— ಎಂದು ಗರ್ಹಣವಂ ಮಾಡುತ್ತಾಳೆ.)

(೭) ತಕವುಡೈಯವನೇ ಯೆನ್ನುಮ್, ಪಿನ್ನುಮ್
ಮಿಕವಿರುಮ್ಬುಮ್ ಪಿರಾನೆನ್ನುಮ್, ಎನ
ತಕವುಯಿರ್ಕ್ಕಮುದೇ ಯೆನ್ನುಮ್, ಉಳ್ಳಮ್
ಉಕವುರುಕಿ ನಿನ್ಱುಳ್ಳುಳೇ.

ಪ್ರ॥ ಉಳ್ಳಮ್ (ತನ್ನ) ಮನಸ್ಸು, ಉಕ-ನಾಶಹೊಂದುವಂತೆ, **ಉರುಕಿ**-(ಸ್ವರೂಪವು) ನೀರಾಗಿ ಕರಗಿ, ಉಳ್‌ಉಳ್ಳೇ - ತನ್ನೊಳಗೆ ತನ್ನೊಳಗೇ, ನಿನ್ಱು-ನಿಂತು, **ತಕವು** - (ಕೃಪಾದಿ) ಸ್ವಭಾವಗಳನ್ನು, ಉಡೈಯವನೇ – ಉಳ್ಳವನೇ, **ಎನ್ನುಮ್**-ಎನ್ನುತ್ತಾಳೆ; ಪಿನ್ನುಮ್-ಮತ್ತೂ, ಮಿಕ-ಅಧಿಕವಾಗಿ, ವಿರುಮ್ಬುಮ್-ಆಶೆಯುಳ್ಳ, (ಆಶೆಯನ್ನುಂಟುಮಾಡುವ), ಪಿರಾ‌ನ್-ಉಪಕಾರಕನಾದ ಸ್ವಾಮಿಯೇ, ಎನ್ನುಮ್-ಎನ್ನುತ್ತಾಳೆ; ಎನದು-ನನ್ನ, ಅಕ ಉಯಿರ್ಕ್ಕು – ಅನ್ತರಂಗವಾದ ಆತ್ಮತತ್ತ್ವಕ್ಕೆ, ಅಮುದೇ-ಅಮೃತವೇ, ಎನ್ನುಮ್-ಎಂದು ಕೂಗುತ್ತಾಳೆ.

( ಸ-ಗಾ-ರ ॥ )—

**ಸೇಯಂ ದ್ರವೀಕೃತತನುರ್ವಿಗತಸ್ವಚಿತ್ತಾ**
**ಹಾ! ಹನ್ತ! ಜಲ್ಪತಿ ಸುಶೀಲ! ದಯಾಪರೇತಿ ।**
**ಸಂವರ್ಧಿತಾಭಿಲಷಿತೋಽಸಿ ಮಮೇಶ್ವರೇತಿ**
**ಸ್ವಾತ್ಮಾನ್ತರೋಽಸಿ ಚ ಮಮಾಮೃತಸಾಗರೇತಿ ॥**

ತಾ|| (ಹೀಗೆ ತಾಯಿಯು ನಿರ್ದಯನೆಂದು ಹೇಳಿದುದನ್ನು ಕೇಳಿ ಸಹಿಸಲಾರದೆ ಇವಳು ಅವನ ಕೃಪಾಗುಣಾದಿಗಳನ್ನೇ ಶ್ಲಾಘಿಸುತ್ತಾಳೆ.) ತನ್ನ ಮನಸ್ಸನ್ನೆಲ್ಲಾ ಅವನಲ್ಲಿ ಅರ್ಪಿಸಿ ನಷ್ಟಚಿತ್ತೆಯಾದ ಇವಳು ದ್ರವೀಭೂತೆಯಾಗಿ ನಿಂತು – "ಹೇ ಕೃಪಾಳೋ! ಆತ್ಮಾಶಾವರ್ಧಕ! ಅಮೃತಸ್ವರೂಪ!" ಎಂಬೀ ಪ್ರಕಾರಗಳಿಂದ ಅವನನ್ನು ಸಂಬೋಧಿಸಿ ಕೂಗುತ್ತ ಅವನ ಭೋಗ್ಯತಾತಿಶಯವನ್ನು ಕೊಂಡಾಡುತ್ತಾಳೆ.

(೭) ಉಳ್ಳುಳಾವಿ ಯುಲರ್ನ್ದುಲರ್ನ್ದು, ಎನ
ವಳ್ಳಲೇ ಕಣ್ಣನೇ ಯೆನ್ನುಮ್, ಪಿನ್ನುಮ್
ವೆಳ್ಳನೀರ್ಕ್ಕಿಡನ್ದಾಯೆನ್ನುಮ್, ಎನ
ಕಳ್ವಿ ತಾಣ್‌ಪಟ್ಟ ವಞ್ಜನೈಯೇ.

ಪ್ರ|| ಎನ ಕಳ್ವಿ-(ನನಗೆ ತನ್ನ ಮನಸ್ಸನ್ನು ತಿಳಿಸದಂತೆ ಮರೆಸುವ ಸ್ವಭಾವವುಳ್ಳ) ನನ್ನ ಈ ಮೋಸಗಾರಿಯು, ತಾಣ್‌ಪಟ್ಟ–ತಾನು ಸಿಕ್ಕಿಕೊಳ್ಳುವಂತೆ ಅವನು ಮಾಡಿದ, ವಞ್ಜನೈ–ಮೋಸಕೃತ್ಯದ ರೀತಿಯೇನೆಂದರೆ—ಉಳ್ಳುಳ್ ಆವಿ-ಹೃದಯದೊಳು ಇರುವ ಆತ್ಮ ತತ್ತ್ವವು, ಉಲರ್ನ್ದು ಉಲರ್ನ್ದು – ಅತ್ಯಂತ ಶುಷ್ಕವಾಗಿ ಇರೋಣದರಿಂದ, ಎನ ವಳ್ಳಲೇ – ನನ್ನ ಉದಾರಶೀಲನಾದ ಸ್ವಾಮಿಯೇ, ಕಣ್ಣನೇ–(ಸುಲಭನಾದ) ಕೃಷ್ಣನೇ, ಎನ್ನುಮ್‌–ಎಂದು ಕೂಗುತ್ತಾಳೆ; ಪಿನ್ನುಮ್–ಮತ್ತೂ, ವೆಳ್ಳನೀರ್–ಪರಿಪೂರ್ಣಜಲವಾದ ಸಮುದ್ರದಲ್ಲಿ, ಕಿಡನ್ದಾಯ್–ಶಯನ ಮಾಡಿದವನೇ, ಎನ್ನುಮ್–ಎಂದು ಕೂಗುತ್ತಾಳೆ.

( ಸ–ಗಾ–ರ || )—

ಸೇಯಂ ಹಿ ವಞ್ಚನಪರಾ ಹೃದಯಂ ನ ವಕ್ತಿ
ವ್ಯಕ್ತಂ! ಸ್ವಯಂ ಸ್ವವಿಟವಞ್ಚನಕೃತ್ಯಖಿನ್ನಾ |
ಸಂಶೋಷಿತಾತ್ಮಕತಯಾ ವದತೀಹ ಕೃಷ್ಣೇ–
ತ್ಯೌದಾರ್ಯವನ್ನಿತಿ ಚ ವಾರ್ಧಿಶಯೇತಿ ಭೂಮ್ನಾ ||

ತಾ|| ಎಂದಿಗೂ ತನ್ನ ಹೃದಯವನ್ನು ಇತರರಿಗೆ ತೋರ್ಪಡಿಸದೇ ಇರುವ ಸ್ವಭಾವವುಳ್ಳ ಇವಳೂ ಈಗ ಅವನ ವಂಚನೆಗೆ ಸಿಕ್ಕಿ ತನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ವ್ಯಕ್ತವಾಗಿಯೇ ತೋರ್ಪಡಿಸುತ್ತ–ಶೋಷಿತಾತ್ಮಸ್ವರೂಪೆಯಾಗಿ, "ನನ್ನ ಉದಾರಶೀಲನಾದ ಸ್ವಾಮಿಯೇ, ನನಗೆ ಸುಲಭನಾದ ಕೃಷ್ಣನೇ, (ಅವತಾರಕಂದವಾದ) ಕ್ಷೀರಾಬ್ಧಿಶಾಯಿಯೇ!" ಎಂದು ಅತ್ಯಂತಸನ್ತಪ್ತೆಯಾಗಿ (ದಾಹವುಳ್ಳವರು

“ ತಣ್ಣೀರು ತಣ್ಣೀರು ” ಎಂದು ಕೂಗುವಂತೆ) ಕೂಗುತ್ತ ಅವನ ಗುಣಗಳಲ್ಲಿ ಮಗ್ನೆಯಾಗುತ್ತಾಳೆ.

(೮) ವಞ್ಜನೇ ಯೆನ್ನುಮ್ ಕೈತೊೞುಮ್, ತನ
ನೆಞ್ಜಮ್ ವೇವ ನೆಡಿದುಯಿರ್ಕ್ಕುಮ್, ವಿಱಲ್
ಕಞ್ಜನೈ ವಞ್ಜನೈ ಶೆಯ್‌ದೀರುಮ್ಮೈ-
ತ್ತಞ್ಜಮೆನ್ರಿವಳ್ ಪಟ್ಟನವೇ.

ಪ್ರ|| ವಞ್ಜನೇ-ವಂಚಕನೇ, ಎನ್ನುಮ್ - ಎನ್ನುತ್ತಾಳೆ; ಕೈತೊೞುಮ್-ಅಂಜಲಿಮಾಡುತ್ತಾಳೆ; ತನೆಞ್ಜಮ್-ತನ್ನ ಮನಸ್ಸು, ವೇವ-ದಗ್ಧವಾಗಿರುವಂತೆ, ನೆಡಿದುಯಿರ್‌ಕ್ಕುಮ್-ದೀರ್ಘವಾಗಿ ಉಸುರುಬಿಡುವಳು; ವಿಱಲ್-ಬಲಿಷ್ಠನಾದ, ಕಞ್ಜನೈ-ಕಂಸನನ್ನು, ವಞ್ಜನೈಶೆಯ್‌ದೀರ್-ವಂಚನೆಮಾಡಿದವರೇ, ಉಮ್ಮೈ-ನಿಮ್ಮನ್ನು, ತಞ್ಜಮ್-ತನಗೆ ಶರಣ್ಯಭೂತರೆಂದು, ಇವಳ್-ಇವಳು, ಪಟ್ಟನ-ಪಡುವಪಾಡು, ಏ-ಏನಾಗಿದೆ ? (ದುಸ್ಸಹವಾಗಿದೆ-ಎಂದು ಭಾವವು.)

( ಸ-ಗಾ-ರ || )—

ಹೇ! ವಞ್ಚಕೇತಿ ವದತಿ ಸ್ವಯಮಞ್ಜಲಿಂ ಚ
ಸ್ವೈರಂ ಕರೋತಿ ಬತ! ದಗ್ಧನಿಜಾನ್ತರಙ್ಗಾ |
ಸೇಯಂ ಹಿ ನಿಶ್ಶ್ವಸಿತಿ ಹಾ! ಶರಣಂ ಪ್ರಪನ್ನಾ
ತ್ವಾಂ ಕಂಸವಞ್ಚಕ! ಕಥಂ ಬತ! ವಾಽನುಭೂಯಾತ್? ||

ತಾ|| (ಇವಳಪಾಡು ದುಸ್ಸಹವೆಂದು ತಾಯಿಯು ಹೇಳುತ್ತಾಳೆ.) ಇವಳು ಎಲೈ ವಂಚಕನೇ !—ಎಂದು ಕೂಗುತ್ತ ಕೈಮುಗಿಯುತ್ತಾಳೆ. ತನ್ನ ಹೃದಯವು ದಗ್ಧವಾಗಿರುವಂತೆ ದೊಡ್ಡ ಉಸುರುಬಿಡುತ್ತಾಳೆ. ಎಲೈ ಕಂಸಧ್ವಂಸಕನಾದ ಭಗವನ್ತನೇ ! ನಿನ್ನನ್ನೇ ಶರಣವನ್ನಾಗಿ ಹೊಂದಿರುವ ಇವಳಪಾಡು ಹೀಗಿರುವಲ್ಲಿ ನೀನು ಉದಾಸೀನನಾಗಿರಬಹುದೇ ?—ಎಂದು ತಾತ್ಪರ್ಯ.

(೯) ಪಟ್ಟಪೋದೆೞುಪೋದಱಿಯಾಳ್, ವಿರೈ
ಮಟ್ಟಲರ್ ತಣ್‌ತುೞಾಯೆನ್ನುಮ್, ಶುಡರ್
ವಟ್ಟವಾಯ್ ನುದಿ ನೇಮಿಯೀರ್, ನುಮ-
ದಿಟ್ಟಮೆನ್‌ಕೊಲಿವ್ವೇೞೈಕ್ಕೇ.

ಪ್ರ॥ ಪಟ್ಟಪೋದು–ಅಸ್ತಮಯವೇಳೆಯನ್ನೂ, ಎಙ್ಙುಪೋದು–ಉದಯವೇಳೆಯನ್ನೂ, ಅಱಿಯಾಳ್–ತಿಳಿಯಲಾರಳು. ಬಿಟ್ಟ–ಪರಿಮಳವೂ, ಮಟ್ಟು–ಜೇನೂ, ಅಲರ್–ಹರಡಿಕೊಂಡಿರುವ, ತಣ್ತುೞಾಯ್–(ಭೋಗ್ಯವಾದ) ಶೀತಳವಾದ ತುಳಸಿಯು, ಎನ್ನುಮ –ಎನ್ನುತ್ತಿದಾಳೆ. ಶುಡರ್–ಜ್ವಾಲೆಗಳುಳ್ಳ, ವಟ್ಟಮ್–ವೃತ್ತಾಕಾರವಾದ, ವಾಯ್–ಬಾಯಿಯನ್ನೂ, ನುದಿ–ತೈಕ್ಷ್ಣ್ಯವನ್ನೂ ಉಳ್ಳ, ನೇಮಿಯಾರ್–ಚಕ್ರವನ್ನು ಧರಿಸಿರುವವರೇ, ನುಮದು–ನಿಮ್ಮ, ಇಟ್ಟಮ್–ಇಷ್ಟವು (ಅಭಿಪ್ರಾಯವು), ಇವ್ವೇೞೈಕ್ಕು–ಈ ಚಪಲೆಗೆ (ಚಪಲೆಯಾದ ಇವಳ ವಿಷಯದಲ್ಲಿ), ಎನ್ಕೊಲ್–ಏನಾಗಿರುವುದೋ ?

( ಸ–ಗಾ–ರ ॥ )—

**ಅಸ್ತಂ ನ ವೇತ್ತಿ! ನ ಚ ವೇತ್ತಿ ಕಿಲ ಪ್ರಭಾತಂ**
**ಸೇಯಂ ಸದಾಽಪಿ ತುಲಸೀಂ ತವ ವಕ್ತಿ ರಮ್ಯಾಮ್ ।**
**ಜ್ವಾಲಾಕುಲಾತಿನಿಶಿತಾನನಚಕ್ರಪಾಣೇ!**
**ದೀನಾಮಿಮಾಂ ಪ್ರತಿ ಕಿಮುಸ್ತಿ ತವಾಽದ್ಯ ಚಿತ್ತೇ? ॥**

ತಾ॥ ಉದಯಾಸ್ತಮಯ ವೇಳೆಗಳನ್ನೂ ತಿಳಿಯದಷ್ಟು ಮೋಹಾವಿಷ್ಟೆಯಾಗಿ ಇವಳು ಯಾವಾಗಲೂ ನಿಮ್ಮ ಭೋಗ್ಯವಾದ ತುಳಸಿಯನ್ನೇ ಅಪೇಕ್ಷಿಸುತ್ತ "ತುಳಸಿ, ತುಳಸಿ'' ಎನ್ನುತ್ತಿದಾಳೆ. (ಆಶ್ರಿತರಕ್ಷಣಾರ್ಥವಾಗಿ) ಚಕ್ರಪಾಣಿಯಾದ ನೀವು ಈ ಚಪಲೆಯವಿಷಯದಲ್ಲಿ ಏನುಮಾಡಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿರುತ್ತೀರಿ ? – ಎಂದು ತಾಯಿಯು ಕೇಳುತ್ತಾಳೆ.

(೧೦) ಏೞೈಪೇದೈ ಯಿರಾಪ್ಪಕಲ್, ತನ
ಕೇೞ್ಇಲೊಣ್ ಕಣ್ಣನೀರ್ ಕೊಣ್ಡಾಳ್, ಕಿಳರ್
ವಾೞ್ವೈ ವೇವ ವಿಲ್ಲಜ್ಞಿರೈ ಶೆಱ್ಱೀರ್, ಇವಳ್
ಮಾೞ್ಕೈ ನೋಕ್ಕೊನ್ಱುಮರ್ ವೈತ್ತಿನ್ಮಿನೇ.

ಪ್ರ॥ ಏೞೈ–ಚಪಲೆಯಾಗಿಯೂ, ಪೇದೈ–ದೀನೆಯಾಗಿಯೂ ಇರುವ ಇವಳು, ಇರಾಪ್ಪಕಲ್–ರಾತ್ರಿಯೂ ಹಗಲೂ, ತನ– ತನ್ನ, ಕೇೞ್ ಇಲ್–ಸಮಾನವಿಲ್ಲದ (ಅಸದೃಶವಾದ), ಒಣ್–ರಮ್ಯವಾದ, ಕಣ್–ಕಣ್ಣುಗಳಲ್ಲಿ, ನೀರ್ – ನೀರನ್ನು, ಕೊಣ್ಡಾಳ್–ತುಂಬಿಕೊಂಡಳು; ಕಿಳರ್–ಅತ್ಯುಚ್ಛ್ರಾಯವಂಪಡೆದ ಪರಹಿಂಸಕವಾದ, ವಾೞ್ವು–(ರಾವಣನ) ಐಶ್ವರ್ಯವು, ವೇವ–ಬೆಂದುಹೋಗಿ ನಷ್ಟವಾಗುವಂತೆ,

ಇಲಙ್ಗೈ-ಲಂಕೆಯನ್ನು, ಶೆಱ್ಱೀರ್ - ನಾಶಮಾಡಿದ ಸ್ವಾಮಿಯೇ, ಇವಳ್-ಇವಳ, ಮಾಱ್ಱನೋಕ್ಕೊನ್ಱುಮ್-ಹುಲ್ಲೇಕರುವಿನ ದೃಷ್ಟಿಯಂತಿರುವ ದೃಷ್ಟಿಯೊಂದನ್ನಾದರೂ, ವಾಟ್ಟೇನ್ಮಿನೇ-ನಾಶಪಡಿಸದೆ ಇರು (ರಕ್ಷಿಸು).

( ಸ-ಗಾ-ರ || )—

ದೀನಾ ತ್ವಿಯಂ ಭ್ರಮವಶಾ ಹಿ ದಿವಾನಿಶಂ ಚಾ-
ಪ್ಯಶ್ರುಪ್ರವಾಹಭರಿತಾಽಸ್ತ್ಯಸಿತಾಯತಾಕ್ಷೀ |
ಲಙ್ಕಾಂ ಪ್ರಣಾಶ್ಯ ಕಿಲ ಕಣ್ಟಕ ದುಷ್ಟಭುಕ್ತ್ವಂ
ಪಾಪ್ರಧ್ವಂಸಯೋಽದ್ಯ ಪರಿಪಾಹಿ ಕಟಾಕ್ಷಮಸ್ಯಾಃ ||

ತಾ|| ಇವಳು ತನ್ನ ರಮ್ಯವಾದ ನೇತ್ರಗಳಲ್ಲಿ ನೀರುತುಂಬಿಕೊಂಡು ರಾತ್ರಿಯೂ ಹಗಲೂ ಹೀಗೆ ಚಪಲೆಯಾಗಿಯೂ ದೀನೆಯಾಗಿಯೂ ಇದ್ದಾಳೆ. ಪರಹಿಂಸಕವಾದ ರಾವಣನ ಪರಮೈಶ್ವರ್ಯವೆಲ್ಲಾ ದಗ್ಧವಾಗುವಂತೆ ಲಂಕಾನಗರವನ್ನು ನಾಶಮಾಡಿದ ಸ್ವಾಮಿಯೇ! (ಅಸಿತೇಕ್ಷಣೆಯಾದ ಸೀತೆಯ ವಿಷಯದಲ್ಲಿ ಪ್ರೀತಿಮಾಡಿದ ನೀನು) ಇವಳ ಹರಿಣದೃಷ್ಟಿಯಂತಿರುವ ಈ ರಮ್ಯವಾದ ದೃಷ್ಟಿಯನ್ನಾದರೂ ಪರಿಪಾಲಿಸು.

(೧೧) ವಾಟ್ಟಮಿಲ್ ಪುಕೞ್ ವಾಮನನೈ, ಇಶೈ
ಕೂಟ್ಟಿ ವಣ್‌ಶಡಕೋಪನ್ ಶೊಲ್, ಅಮೈ
ಪಾಟ್ಟೋರಾಯಿರತ್ತಿಪ್ಪತ್ತಾಲ್, ಅಡಿ
ಶೂಟ್ಟಲಾಕುಮನ್ದಾಮಮೇ.

ಪ್ರ|| ವಾಟ್ಟಮ್-ಬಾಡಿಹೋಗೋಣವು, ಇಲ್-ಇಲ್ಲದ, ಪುಕೞ್-ಗುಣೋತ್ಕರ್ಷವುಳ್ಳ, ವಾಮನನೈ-ವಾಮನರೂಪಿಯಾದ ಭಗವನ್ತನನ್ನು ಕುರಿತು, ವಣ್-ಉದಾರವಾದ, ಶಡಕೋಪನ್ - ಶ್ರೀ ಶಠಾರಿಯು, ಇಶೈಕೂಟ್ಟಿ-ಗಾನಸ್ವರದೊಡನೆ ಕೂಡಿಸಿ, ಶೊಲ್-ಹೇಳಿದ, ಅಮೈ-ಲಕ್ಷಣಪರಿಪೂರ್ಣವಾದ, ಓರ್-ಅದ್ವಿತೀಯವಾದ, ಪಾಟ್ಟು-ಹಾಡುಗಳು, ಆಯಿರತ್ತು-ಸಹಸ್ರದೊಳು, ಇಪ್ಪತ್ತಾಲ್-ಈ ದಶಕದಿಂದ, ಅಡಿ-ಆ ವಾಮನನ ಪಾದಗಳಲ್ಲಿ, ಅನ್-ಕಮನೀಯವಾದ, ತಾಮಮ್-ಮಾಲೆಯನ್ನು, ಶೂಟ್ಟಲಾಕುಮ್-ಸಮರ್ಪಿಸಬಹುದು.

( ಸ–ಗಾ–ರ ॥ )—

ನಿತ್ಯಾಮುದಾರಗುಣವಾಮನದಿವ್ಯಕೀರ್ತಿಂ
ಸ್ತೋತುಂ ಮುನಿಶ್ಶಠರಿಪುಃ ಕುರುಕಾಪುರೀಶಃ ।
ಛನ್ದೋನಿಬದ್ಧಮಿಹ ಪದ್ಯಸಹಸ್ರಮಾಹ
ಸ್ಯಾತ್ತತ್ಪದಾಬ್ಜಯುಗಳೀ ದಶಕಂ ತ್ವಿದಂ ಸ್ರಕ್ ॥

ತಾ॥ ದಿವ್ಯಗುಣಭೂಷಿತನಾದ ಶ್ರೀ ವಾಮನರೂಪಿಯಾದ ಭಗವನ್ತನನ್ನು ಕುರಿತು ಶ್ರೀ ಶಠಾರಿಮುನಿವರ್ಯರು ಸ್ತುತಿರೂಪವಾಗಿ ಗಾನಸ್ವರದೊಡನೆ ರಚಿಸಿರುವ ಲಕ್ಷಣೋಪೇತವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಅವನ ಪಾದಾರವಿಂದದಲ್ಲಿ ಒಂದು ರಮಣೀಯವಾದ ಮಾಲೆಯಾಗಿ ಸಮರ್ಪಿಸಬಹುದು.

( ದ್ರ–ಉ-ಸಂ ॥ )—

ಶಶ್ವಾರ್ಥಿತಾನಧಿಗಮೇನ ಸಮುತ್ಥಿತಾರ್ತಿ–
ರಗ್ರೇ ಹರೇಃ ಪರಮುಖೇನ ಯಥಾ ವಿಧೇಯಮ್ ।
ಆರ್ತೇರ್ನಿವೇದನಮಪಾಕರಣಾರ್ಥನಂ ಚ
ವಾಞ್ಛಾಂ ತಥಾ ಮುನಿರಗಾನ್ಮಹತೀಂ ಚತುರ್ಥೇ ॥

( ದ್ರ–ಉ–ತಾ–ರ ॥ )—

ಪ್ರಹ್ಲಾದಾರ್ಥೇ ನೃಸಿಂಹಂ ಕ್ಷಪಿತವಿಪದುಷಾವಲ್ಲಭಂ ಕ್ಷಿಪ್ತಲಜ್ಜಂ
ಕ್ಷ್ವೇಳಪ್ರತ್ಯರ್ಥಿಕೇತುಂ ಶ್ರಮಹರತುಲಸೀಮಾಲಿನಂ ಧೈರ್ಯಹೇತುಮ್ ।
ತ್ರಾಣೇ ದತ್ತಾವಧಾನಂ ಸ್ವರಿಪುಹತಿಕೃತಾಶ್ವಾಸನಂ ದೀಪ್ತಹೇತಿಂ
ಸತ್ಪ್ರೇಕ್ಷಾರಕ್ಷಿತಾರಂ ವ್ಯಸನನಿರಸನಂ ವ್ಯಕ್ತಕೀರ್ತಿಂ ಜಗಾದ ॥

(ಈ ಚತುರ್ಥದಶಕದಸಾರಾಂಶ—)

ಈ ನಾಲ್ಕನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಪ್ರಾರ್ಥನೆಯು ಕೈಗೂಡದೆಹೋದುದರಿಂದ ಮೋಹಾವಿಷ್ಟೆಯಾದ ನಾಯಕಿಯ ಅವಸ್ಥೆಯಂಪಡೆದು ಅತ್ಯನ್ತಸನ್ತಾಪವಂಹೊಂದಿರಲು, ಇವಳ ತಾಯಿಯು ಶ್ರೀ ಭಗವನ್ತನನ್ನು ಕುರಿತು ಇವಳ ಸನ್ತಾಪವನ್ನು ನಿವಾರಣಮಾಡೆಂದು ನಾನಾ ಪ್ರಕಾರಗಳಿಂದ ಪ್ರಾರ್ಥಿಸುವಂತೆ ಭಾವಿಸಿ ವರ್ಣಿಸಿ ಇರುತ್ತಾರೆ.



ಶ್ರೀಃ

# ದ್ವಿತೀಯಶತಕದಲ್ಲಿ—ಪಂಚಮದಶಕ.

(ಅನ್ದಾಮತ್ತನ್ಬು ಶೆಯ್ದು—)

(ಇಲ್ಲಿ ಶ್ರೀಭಗವತ್ಸಂಶ್ಲೇಷದಿಂದಸನ್ತುಷ್ಟರಾದ ಶಠಾರಿಮುನಿವರ್ಯರು ಅವನ ದಿವ್ಯ ಭೂಷಣ–ದಿವ್ಯಾಯುಧ–ದಿವ್ಯಾವಯವ–ಸೌನ್ದರ್ಯಾದ್ಯತಿಶಯವನ್ನೂ ನಿತ್ಯಸೂರಿಸೇವ್ಯತ್ವವನ್ನೂ ವರ್ಣಿಸುತ್ತಾರೆ.)

---

(೧) ಅನ್ದಾಮತ್ತನ್ಬು ಶೆಯ್ದೆನ್ನಾವಿ ಶೇರಮ್ಮಾನುಕ್ಕು,
ಅನ್ದಾಮವಾಳ್ಮುಡಿ ಶಙ್ಗಾ಴ಿ ನೂಲಾರಮುಳ,
ಶೆನ್ದಾಮರೈ ತ್ತಡಙ್ಕಣ್ ಶೆಙ್ಕನಿವಾಯ್ ಶೆಙ್ಕಮಲಮ್,
ಶೆನ್ದಾಮರೈಯಡಿಕ್ಕಳ್ ಶೆಮ್ಪೊನ್ ತಿರುವುಡಮ್ಬೇ.

ಪ್ರ॥ ಅನ್ದಾಮತ್ತು–ಪರಮಪದದಲ್ಲಿ, ಅನ್ಬು–ಪ್ರೀತಿಯನ್ನು, ಶೆಯ್ದು–ಮಾಡಿ, ಎನ್ ಆವಿ–ನನ್ನ ಮನಸ್ಸಿನಲ್ಲಿ, ಶೇರ್–ಹೊಂದಿಸೇರಿದ, ಅಮ್ಮಾನುಕ್ಕು–ಸ್ವಾಮಿಗೆ, ಅಮ್–ರಮ್ಯವಾದ, ದಾಮಮ್–ಮಾಲೆಯೊಡನೆಕೂಡಿರುವ, ವಾಳ್–ತೇಜಸ್ಸುಳ್ಳ, ಮುಡಿ–ಕಿರೀಟವೂ, ಶಙ್ಗು ಆೞಿ–ಶಂಖಚಕ್ರಗಳೂ, ನೂಲ್–ಯಜ್ಞೋಪವೀತವೂ, ಆರಮ್–ಹಾರವೂ, ಉಳ–ಇವೆಲ್ಲವೂ ಪ್ರಕಾಶಿಸುತ್ತಿವೆ; ಕಣ್–ಕಣ್ಣುಗಳು, ಶೆನ್ದಾಮರೈತ್ತಡಮ್ – ಕೆಂದಾವರೆಸರೋವರವಾಗಿವೆ; ಶೆಮ್ಕನಿವಾಯ್ – ಕೆಂಪಾದ ಬಿಂಬಾಧರವು (ವಕ್ತ್ರವು), ಶೆಮ್ಕಮಲಮ್–ಕೆಂದಾವರೆಹೂವಾಗಿದೆ; ಅಡಿ–ಪಾದಗಳು, ಶೆನ್ದಾಮರೈ–ಕೆಂಪುತಾವರೆ ಪುಷ್ಪಗಳಾಗಿವೆ; ತಿರುವುಡಮ್ಬು–ದಿವ್ಯಶರೀರವು, ಶೆಮ್ಪೊನ್–ಏ–ಕೆಂಪುಭಂಗಾರವೇ !

( ಸ–ಗಾ–ರ ॥ )—

**ಸ್ಥಿತ್ವಾಽಸೌ ಪರಮೇ ಪದೇ ಮಮ ಹೃದಿ ಸ್ವೈರಂ ಪ್ರವಿಷ್ಟೋಽಧುನಾ !**
**ದಿವ್ಯಸ್ರಗ್ವಿಕಿರೀಟಚಕ್ರಜಲಜಾ ಯಜ್ಞೋಪವೀತಸ್ರಜೌ ।**
**ಏತಾ ಭಾನ್ತಿ ಕಿಲಾಸ್ಯ ನೇತ್ರಯುಗಳಂ ಬಿಮ್ಬಾಧರಂ ಚಾಙ್ಘ್ರಿಯುಕ್–**
**ಸರ್ವಂ ಚಾಮ್ಬುಜಸನ್ನಿಭಂ ! ತನುರಹೋ ! ದಿವ್ಯಾ ಸುವರ್ಣಾತ್ಮಿಕಾ ॥**

ತಾ|| ಪರಮಪದದಲ್ಲಿ ಹೇಗೆ ಪ್ರೀತಿಮಾಡಿದಾನೆಯೋ ಹಾಗೆಯೇ ನನ್ನ ಮನಸ್ಸಿನಲ್ಲೂ ಪ್ರೀತಿಮಾಡಿ ಸೇರಿಕೊಂಡಿರುವ ನನ್ನ ಸ್ವಾಮಿಗೆ ದಿವ್ಯಕಿರೀಟ-ಶಂಖಚಕ್ರ-ಯಜ್ಞೋಪವೀತ-ಹಾರಗಳೆಲ್ಲವೂ ಪ್ರಕಾಶಿಸುತ್ತಿವೆ. ಕಣ್ಣುಗಳು ಕೆಂದಾವರೆ ಸರೋವರದಂತೆಯೂ, ಬಿಂಬಾಧರವು ಕೆಂದಾವರೆಯಂತೆಯೂ, ಪಾದಗಳು ಕೆಂದಾವರೆ ಪುಷ್ಪಗಳಂತೆಯೂ, ದಿವ್ಯಶರೀರವು ಕೆಂಪುಭಂಗಾರದಂತೆಯೂ ಇವೆ. (ಇಂತಹ ದಿವ್ಯರೂಪದೊಡನೆ ಬಂದು ನನ್ನಲ್ಲಿ ಸಂಶ್ಲೇಷಿಸಿದನೆಂದು ಭಾವವು)

(೨) ತಿರುವುಡಮ್ಬು ವಾಙ್ಞಾಯಿರ್ ಶೆನ್ದಾಮರೈ ಕ್ಕಣ್ ಕೈಕಮಲಮ್,
ತಿರುವಿಡಮೇ ಮಾರ್ವಮಯನಿಡಮೇ ಕೊಪ್ಪೂಳ್,
ಒರುವಿಡಮುಮೆನ್ದೈ ಪೆರುಮಾನ್ ಅರನೇಯೋ,
ಒರುವಿಡಮೊನ್ಱಿನ್ಱಿ ಯೆನ್ನುಳ್ ಕಲನ್ದಾನುಕ್ಕೇ.

ಪ್ರ|| ಒರುವು ಇಡಮ್-ಬಿಟ್ಟುಬಿಟ್ಟಸ್ಥಲವು, ಒನ್ರುಮ್ ಇನ್ರಿ - ಯಾವುದೂ ಇಲ್ಲದಂತೆ ಎನ್ನುಳ್ ಕಲನ್ದಾನುಕ್ಕು-ನನ್ನೊಳು ಸೇರಿದವನಿಗೆ, ಎನ್ದೈಪೆರುಮಾನ್ಕ್ಕು-ನನ್ನ ಕುಲನಾಥನಿಗೆ, ತಿರು ಉಡಮ್ಬು - ದಿವ್ಯಶರೀರವು, ವಾಙ್ಞಾಯಿರ್-ಆದಿತ್ಯವರ್ಣವಾಗಿದೆ; ಕಣ್-ಕಣ್ಣುಗಳು, ಶೆನ್ದಾಮರೈ-ಕೆಂಪುತಾವರೆಹೂವುಗಳಾಗಿವೆ; ಕೈ-ಹಸ್ತಗಳು, ಶೆಮ್ ಕಮಲಮ್ - ಕೆಂಪುಕಮಲಗಳಾಗಿವೆ; ಮಾರ್ವಮ್-ವಕ್ಷಸ್ಸ್ಥಲವು, ತಿರು ಇಡಮೇ-ಲಕ್ಷ್ಮಿಗೆ ವಾಸಸ್ಥಾನವಾಗಿದೆ; ಕೊಪ್ಪೂಳ್-ನಾಭಿಯು, ಅಯನ್-(ಅಜನಾದ)ಬ್ರಹ್ಮನಿಗೆ, ಇಡಮೇ-ಸ್ಥಾನವೇ ಆಗಿದೆ; ಒರುವು ಇಡಮುಮ್-ನಿಕೃಷ್ಟವಾದ ಸ್ಥಾನವು (ಪರಿಗಣಿತವಾಗದೆ ನಿಹೀನವಾದ ಸ್ಥಾನವು), ಅರನೇ-ರುದ್ರನೇ (ಲಿಂಗರೂಪಿಯಾದ ರುದ್ರನೇ) ಓ-ಆಶ್ಚರ್ಯ!

( ಸ-ಗಾ-ರ || )—

**ತ್ಯಕ್ತ್ವಾಽಸೌ ಸಕಲಂ ಮಯಾ ಸಹ ಹರಿಸ್ಸಾಕ್ಷಾತ್ಸ್ವಯಂ ಸಙ್ಗತೋ!**
**ನಾಥಸ್ಯಾಸ್ಯ ತನುರ್ವಿಭಾತಿ ದಿನಕೃದ್ವರ್ಣಾ ಚ ಪದ್ಮೇ ದೃಶೌ |**
**ಹಸ್ತೌ ಚಾಮ್ಬುರುಹೌ ! ಶ್ರಿಯೋಽಸ್ತಿ ವಸತಿರ್ವಕ್ಷಸ್ಸ್ಥಲೀ! ಬ್ರಹ್ಮಣೋ**
**ನಾಭಿರ್ಭಾತಿ ಚ ಜನ್ಮಭೂರಹಹ ! ತಲ್ಲಿಂಗಂ ಹರೋಽಸೌ ಸ್ವಯಮ್ ||**

ತಾ|| ನನ್ನೊಳು ಯಾವಸ್ಥಾನವನ್ನೂ ಬಿಡದೆ ಸರ್ವಾವಯವ ಸಂಶ್ಲೇಷವಂ ಮಾಡಿದ ನನ್ನ ಕುಲನಾಥನ ದಿವ್ಯಶರೀರವು ಆದಿತ್ಯವರ್ಣವಾಗಿಯೂ, ನೇತ್ರಗಳೂ-

ಹಸ್ತಗಳೂ ಕೆಂದಾವರೆಗಳಾಗಿಯೂ ಇವೆ. ವಕ್ಷಸ್ಸ್ಥಲವು ಲಕ್ಷ್ಮೀವಾಸಸ್ಥಾನವಾಗಿದೆ. ನಾಭಿಯು ಬ್ರಹ್ಮನಿಗೆ ಸ್ಥಾನವಾಗಿದೆ. ನಿಕೃಷ್ಟವಾದ (ಅನುಕ್ತವಾದ) ಸ್ಥಾನವು (ಲಿಂಗವು) ಹರನೇ ಆಗಿರುತ್ತಾನೆ. ಇದು ಎಂತಹ ಆಶ್ಚರ್ಯ! (ಭೃಗು ಮುನಿಯ ಶಾಪದಿಂದ ರುದ್ರನಿಗೆ ಲಿಂಗರೂಪವು ಬಂದುದು ಪುರಾಣ ಪ್ರಮಾಣ ಸಿದ್ಧವಾಗಿದೆಯಷ್ಟೆ.)

**(೩) ಎನ್ನುಳ್ ಕಲನ್ದವನ್ ಶೆಙ್ಕನಿವಾಯ್ ಶೆಙ್ಕಮಲಮ್,**
**ಮಿನ್ನುಮ್ ಶುಡರ್‌ಮಲೈಕ್ಕು ಕ್ಕಣ್ ಪಾದಮ್ ಕೈ ಕಮಲಮ್,**
**ಮನ್ನು ಮುಱುವೇೞುಲಕುಮ್ ವಯಿಱ್‌ಱಿನುಳ,**
**ತನ್ನುಳ್ ಕಲವಾದದೆಪ್ಪೊರುಳುಮ್ ತಾನಿಲ್ಲೈಯೇ.**

ಪ್ರ॥ ಎನ್ನುಳ್–ನನ್ನೊಳಗೆ, ಕಲನ್ದವನ್–ಸಂಶ್ಲೇಷಿಸಿದವನಾಗಿ, ಮಿನ್ನುಮ್–ಪ್ರಕಾಶಿಸುತ್ತಿರುವ, ಶುಡರ್‌ಮಲೈಕ್ಕು- ತೇಜೋಮಯವಾದ ಪರ್ವತಕ್ಕೆ (ಪರ್ವತ ಸದೃಶನಾದ ಭಗವಂತನಿಗೆ), ಶೆಙ್ಕನಿವಾಯ್ – ಕೆಂಪಾಗಿ ಬಿಂಬ ಫಲದಂತಿರುವ ವಕ್ತ್ರವೂ, ಶೆಙ್ಕಮಲಮ್–ಕೆಂದಾವರೆಯಂತಿರುವುದು; ಕಣ್ ಪಾದಮ್ ಕೈ–ಕಣ್ಣುಗಳೂ ಪಾದಗಳೂ ಹಸ್ತಗಳೂ, ಕಮಲಮ್–ಕಮಲದಂತೆ ಇವೆ; ಮನ್ನುಮ್–ಸ್ಥೈರ್ಯವುಳ್ಳ, ಮುಱು–ಪೂರ್ಣವಾದ, ಏೞುಲಕುಮ್–ಸಪ್ತಲೋಕಗಳೂ (ಸಕಲ ಲೋಕಗಳೂ), ವಯಿಱ್‌ಱಿನುಳ–(ಅವನ) ಉದರದಲ್ಲಿ ಅಡಗಿ ಇವೆ. ತನ್ನುಳ್–ಅವನೊಳು, ಕಲವಾದದು–ಸೇರದೆ ಇರುವುದು, ಎಪ್ಪೊರುಳುಮ್ ತಾನ್ ಇಲ್ಲೈ–ಯಾವವಸ್ತುವೂ ಇಲ್ಲವೇ ಇಲ್ಲ.

( ಸ–ಗಾ.ರ ॥ )—

**ಸಮ್ಯಗ್ಭಾತಿ ಮಹೋಜ್ಜ್ವಲಃ ಕಿಲ ಮಯಾ ಸಙ್ಗತ್ಯ ನಾಥೋ ಮಮ**
**ಶ್ರೀಶಸ್ಯಾಸ್ಯ ಮಹಾಚಲಸ್ಯ ವದನಂ ನೇತ್ರಾಂಘ್ರಿಹಸ್ತಾತ್ಮಕಮ್ ।**
**ಸರ್ವಂ ಭಾತಿ ಸರೋಜಮೇವ! ಜಗತಾಂ ಸ್ಥಾನಂ ಕಿಲಾಸ್ಯೋದರಂ**
**ನೈವ ಸ್ಯಾತ್ಕಿಲ ಕಿಞ್ಚಿದಪ್ಯಹಹ! ಹಾ! ತಸ್ಮಿನ್ನ ಯತ್ಸಙ್ಗತಮ್ ॥**

ತಾ॥ ನನ್ನ ಸರ್ವಶರೀರದಲ್ಲೂ ಸಂಶ್ಲೇಷಿಸಿದುದರಿಂದ ಪ್ರಕಾಶಿಸುತ್ತಿರುವ ತೇಜೋಮಯ ಪರ್ವತಸದೃಶನಾದ ಭಗವನ್ತನಿಗೆ ವಕ್ತ್ರವೂ ನೇತ್ರ ಪಾದ ಹಸ್ತ

ಗಳೂ ಕೆಂದಾವರೆಯಂತಿವೆ. ಸಕಲಲೋಕಗಳೂ ಅವನ ಉದರದಲ್ಲಿ ಅಡಗಿವೆ. ಅವನೊಳು ಸೇರದೆ ಇರುವ ವಸ್ತುವೇ ಇಲ್ಲ. (ಅಂತಹ ಸರ್ವೇಶ್ವರನೇ ನನ್ನೊಡನೆ ಸಂಶ್ಲೇಷಿಸಿ ಪ್ರಕಾಶಿಸುತ್ತಿದಾನೆಂದು ಭಾವವು.)

(೪) ಎಪ್ಪೊರುಳುಮ್ ತಾನಾಯ್ ಮರತಕಕ್ಕುನ್ರೊಕ್ಕುಮ್,
ಅಪ್ಪೊ಴ುದೈ ತಾಮರೈಪ್ಪೂ ಕ್ಕಣ್‌ಪಾದಮ್ ಕೈಕಮಲಮ್,
ಎಪ್ಪೊ಴ುದುಮ್ ನಾಳ್‌ತಿಙ್ಗಳ್ಯಾಣ್ಡೂ಴ಿಯೂ಴ಿದೊಱುಮ್,
ಅಪ್ಪೊ಴ುದೈಕ್ಕಪ್ಪೊ಴ುದೆನ್ನಾರಾವಮುದಮೇ

ಪ್ರ|| ಎಪ್ಪೊ಴ುದುಮ್ – ಎಲ್ಲಾ ಕ್ಷಣಗಳಲ್ಲೂ, ಎನ್ನಾಳ್–ಎಲ್ಲಾ ದಿನಗಳಲ್ಲೂ, ಎತ್ತಿಙ್ಗಳ್–ಎಲ್ಲಾ ತಿಂಗಳುಗಳಲ್ಲೂ, ಎವ್ವಾಣ್ಡು – ಎಲ್ಲಾ ವರ್ಷಗಳಲ್ಲೂ, ಎವ್ವೂೞಿ ಊೞಿದೊಱುಮ್–ಸರ್ವವಿಧವಾದ ಕಲ್ಪಗಳಲ್ಲೂ, ಅಪ್ಪೊೞುದೈಕ್ಕಪ್ಪೊೞುದು–ಆಯಾಕಾಲಗಳಲ್ಲಿ, ಎನ್–(ನನ್ನೊಡನೆ ಸಂಶ್ಲೇಷಿಸಿದ) ನನ್ನ, ಆರಾ ಅಮುದಮ್ – ತೃಪ್ತಿಯನ್ನುಂಟುಮಾಡದಂತಹ (ಭೋಗ್ಯತಮವಾದ) ಅಮೃತವು (ಅಮೃತಸ್ವರೂಪನು), ಎಪ್ಪೊರುಳುಮ್ – ಸರ್ವವಸ್ತುಗಳೂ, ತಾನಾಯ್–ತಾನೇ ಆಗಿ, ಮರತಕಕ್ಕುನ್ರೊಕ್ಕುಮ್ - ಮರತಕಪರ್ವತದಂತೆ ಆಗಿರುವನು; ಅಪ್ಪೊೞುದೈ–ಆಗತಾನೇ ವಿಕಸಿತನಾದ, ತಾಮರೈಪ್ಪೂ–ತಾವರೆಹೂವಿನಂತೆ, ಕಣ್–ಕಣ್ಣುಗಳೂ, ಪಾದಮ್–ಪಾದಗಳೂ, ಕೈಕಮಲಮ್–ಕಮಲದಂತೆ ಹಸ್ತಗಳೂ (ರಮಣೀಯವಾಗಿ) ಇವೆ.

( ಸ–ಗಾ–ರ || )—

ಸೋಽಯಂ ಸರ್ವಕಲಾಸು ಸರ್ವದಿವಸೇಷ್ವಪ್ಯಸ್ತಿ ಮಾಸೇಷ್ವಹೋ!
ಸರ್ವೇಷ್ವೇವ ಸಮಸ್ತವತ್ಸರಗಣೇಷ್ವೇವಂ ಹಿ ಕಲ್ಪೇಷ್ವಪಿ |
ಸಙ್ಕ್ಲಿಷ್ಯೈವ ಮಯಾ ಸಹಾಮೃತನಿಧಿಶ್ಶಾಶ್ವತೋಽತ್ಯ ವಿವ ಸ್ವಯಂ
ಸರ್ವಾತ್ಮಾ ಽಸಿತಪರ್ವತೋಽಮ್ಬುಜಮಿದಂ ನೇತ್ರಾಂಘ್ರಿಹಸ್ತಂ ನವಮ್ ||

ತಾ|| ಸಕಲ–ಕ್ಷಣ–ದಿನ–ಮಾಸ–ವರ್ಷ–ಕಲ್ಪಾದಿಗಳಲ್ಲೂ ಆಯಾ ಕಾಲಗಳಲ್ಲಿ (ನನ್ನೊಡನೆ ಸಂಶ್ಲೇಷಿಸಿ) ಭೋಗ್ಯತಮವಾದ (ಎಷ್ಟು ಅನುಭವಿಸಿದರೂ ತೃಪ್ತಿಯನ್ನುಂಟುಮಾಡದಂತಿರುವ) ಅಮೃತವೇ ಎಂಬಂತೆ ಇರುವ ಭಗವನ್ತನು ಸರ್ವವಸ್ತುಗಳಿಗೂ ತಾನೇ ಆಶ್ರಯನಾಗಿ ಮರತಕಾದ್ರಿಯಂತೆ ಇರುವನು. ಅವನ ಕಣ್ಣುಗಳೂ ಪಾದಗಳೂ ಹಸ್ತಗಳೂ ಕಮಲಗಳಂತೆ ರಮಣೀಯವಾಗಿಯೂ

ಭೋಗ್ಯವಾಗಿಯೂ ಇರುವುವು. (ಪ್ರತಿಕ್ಷಣವೂ ನೂತನವಾದ ಭೋಗ್ಯತಾತಿಶಯವುಳ್ಳವನೆಂದು ಭಾವವು.)

(೫) ಆರಾವಮುದಮಾಯಲ್ಲಾವಿಯುಳ್ ಕಲನ್ದ,
ಕಾರಾರ್ ಕರುಮುಕಿಲ್ ಪೋಲೆನ್ನಮ್ಮಾನ್ ಕಣ್ಣನುಕ್ಕು,
ನೇರಾ ವಾಯ್ ಶೆಮ್ಬವಳಮ್ ಕಣ್ ಪಾದಮ್ ಕೈ ಕಮಲಮ್,
ಪೇರಾರ ನೀಣ್ಮುಡಿ ನಾಣ್ ಪಿನ್ನುಮಿಳೈ ಪಲವೇ

ಪ್ರ|| ಆರಾವಮುದಮಾಯ್-ನಿರತಿಶಯಭೋಗ್ಯಭೂತನಾಗಿ, ಅಲ್-ಒಂದು ವಸ್ತುವೆಂದು ಹೇಳಲಶಕ್ಯವಾದ, ಆವಿಯುಳ್-(ನನ್ನ) ಮನಸ್ಸಿನಲ್ಲಿ, ಕಲನ್ದ-ಸೇರಿ ನಿಂತಿರುವ, ಕಾರ್ ಆರ್-ವರ್ಷಕಾಲದಲ್ಲಿ ಪೂರ್ಣವಾದ, ಕರುಮುಕಿಲ್ ಪೋಲ್-ನೀಲಮೇಘವಂತಿರುವ, ಎನ್ ಅಮ್ಮಾನ್-ನನ್ನ ಸ್ವಾಮಿಯಾದ, ಕಣ್ಣನುಕ್ಕು-ಕೃಷ್ಣನಿಗೆ, ಶೆಮ್-ಕೆಂಪಾದ, ಪವಳಮ್-ಹವಳವು, ವಾಯ್ - ಅಧರವನ್ನು, ನೇರಾ-ಹೋಲಲಾರದು (ಅಧರಕ್ಕೆ ಸದೃಶನಾಗಲಾರದು) ; ಕಮಲಮ್ - ಕಮಲಗಳು, ಕಣ್ ಪಾದಮ್ ಕೈ-ನೇತ್ರ ಪಾದ ಹಸ್ತಗಳನ್ನು, ನೇರಾ-ಹೋಲಲಾರವು; ಪೇರ್-ದೊಡ್ಡದಾದ, ಆರಮ್-ಹಾರಗಳೂ, ನೀಳ್-ಉನ್ನತವಾದ, ಮುಡಿ-ಕಿರೀಟವೂ, ನಾಣ್-ಕಟಿಸೂತ್ರವೂ, ಪಿನ್ನುಮ್-ಮತ್ತೂ, ಇಳೈ ಪಲ - ಆಭರಣಗಳು ಅನೇಕವಾಗಿವೆ.

( ಸ-ಗಾ-ರ || ) —

**ಸಮುತ್ಪನ್ನಾಮೃತವಾರಿಧಿರ್ಹೃದಿ ಮಮಾಪ್ಯನ್ತಃ ಪ್ರವಿಶ್ಯಾಸತೋ**
**ನಾಥೋ ಮೇ ಽಸ್ತಿ ಹಿ ನೀಲಮೇಘಸದೃಶಃ ಕೃಷ್ಣಃ ಪ್ರಭುರ್ನಿಸ್ಸಮಃ|**
**ಚಕ್ಷುಃಪಾದಕರೇ ನ ಪದ್ಮಮುಪಮಾ! ನೈವ ಪ್ರವಾಳೋ ಽಧರೇ**
**ಭೂಯಾದಸ್ಯ ಲಸನ್ತಿ ಹಾರಮುಕುಟೌ ಕಾಂಚ್ಯಾದಿಭೂಷಾಗಣಾಃ ||**

ತಾ|| ನಿರತಿಶಯಭೋಗ್ಯನಾಗಿ ನನ್ನ ಮನಸ್ಸಿನಲ್ಲಿ ಕಲೆತಿರುವ ನೀಲಮೇಘಶ್ಯಾಮನಾದ ನನ್ನ ಶ್ರೀಕೃಷ್ಣಸ್ವಾಮಿಯ ಅಧರಕ್ಕೆ ಕೆಂಪುಹವಳವೂ ಸಮಾನವಾಗಲಾರದು; ನೇತ್ರ, ಪಾದ ಹಸ್ತಗಳಿಗೆ ಕಮಲಗಳೂ ಸಮಾನವಾಗಲಾರವು ; ಇಂತಹ ದಿವ್ಯಸೌನ್ದರ್ಯವುಳ್ಳ ಭಗವನ್ತನಿಗೆ ಹಾರ ಕಿರೀಟ ಕಟಿಸೂತ್ರಾದಿ ದಿವ್ಯಾಭರಣಗಳೂ ಅಸಂಖ್ಯಾತವಾಗಿವೆ. (ಇಂತಹ ದಿವ್ಯಸೌನ್ದರ್ಯ - ದಿವ್ಯಾಭರಣಭೂಷಿತನಾದವನು ನಿಹೀನವಾದ ನನ್ನ ಹೃದಯದಲ್ಲಿ ಸೇರಿದನೆಂದು ಭಾವವು.)

(೬) ಪಲಪಲವೇ ಯಾಬರಣಮ್ ಪೇರುಮ್ ಪಲಪಲವೇ,
ಪಲಪಲವೇ ಶೋದಿವಡಿವು ಪಣ್ಬೆಣ್ಣಿಲ್,
ಪಲಪಲ ಕಣ್ಡುಣ್ಡು ಕೇಟ್ಟುಱ್ಱು ಮೋನ್ದಿನ್ಬಮ್,
ಪಲಪಲವೇ ಞಾನಮುಮ್ ಪಾಮ್ಬಣೈಮೇಲಾಱ್ಕೇಯೋ

ಪ್ರ|| ಪಾಮ್ಬಣೈಮೇಲಾಱ್ಕು–ಶೇಷಶಾಯಿಯಾದ ನನ್ನ ಸ್ವಾಮಿಗೆ, ಪಣ್ಬು ಎಣ್ಣಿಲ್–ಸ್ವಭಾವವಾದ ಗುಣಗಳನ್ನು ಪರಿಶೀಲಿಸಿದರೆ, ಆಭರಣಮ್–ಆಭರಣಗಳು, ಪಲಪಲ–ಅನೇಕವಿಧವಾಗಿ ಅಸಂಖ್ಯಾತವಾಗಿವೆ; ಪೇರುಮ್–ನಾಮಧೇಯಗಳೂ, ಪಲಪಲವೇ–ಅನೇಕವಾಗಿವೆ; ಶೋದಿವಡಿವು–ಜ್ಯೋತಿರ್ಮಯವಾದ ದಿವ್ಯಮಂಗಳ ವಿಗ್ರಹವೂ, ಪಲಪಲವೇ – ಅನೇಕಪ್ರಕಾರವಾಗಿವೆ; ಕಣ್ಡು–ನೋಡಿ, ಉಣ್ಡು–ಭುಜಿಸಿ, ಕೇಟ್ಟು–ಕೇಳಿ, ಉಱ್ಱು – ಸ್ಪರ್ಶಮಾಡಿ, ಮೋನ್ದು – ವಾಸನೆನೋಡಿ (ಪಡೆದಿರುವ), ಇನ್ಬಮ್–ಸುಖವೂ, ಪಲಪಲ–ಅನೇಕ ಪ್ರಕಾರವಾಗಿವೆ; ಞಾನಮುಮ್–ಜ್ಞಾನವೂ, ಪಲಪಲವೇ–ಅನೇಕವಿಧವಾದುದೇ.

( ಸ-ಗಾ-ರ || )—

ದಿವ್ಯಾನ್ಯಾಭರಣಾನಿ ಚಾಪ್ಯಗಣಿತಾನ್ಯಸ್ಯಾಸ್ತಿ ನಾಮಾವಳಿ–
ರ್ದಿವ್ಯಾ ಚಾಪ್ಯಮಿತಾಽಸ್ತಿ ರೂಪಸರಣಿರ್ದಿವ್ಯಾ ಽಪ್ಯನನ್ತಾ ಹರೇಃ |
ದಿವ್ಯಂ ದೃಷ್ಟಿರುಚಿಶ್ರುತಿಸ್ಪೃಗುದಿತಂ ಘ್ರಾಣೇನ್ದ್ರಿಯಸ್ಥಂ ಸುಖಂ
ಸರ್ವಂ ಚಾಮಿತಮೇವ ಶೇಷಶಯಿತುರ್ಜ್ಞಾನಂ ಚ ದಿವ್ಯಂ ಬಹು ||

ತಾ|| ಶೇಷಶಾಯಿಯಾದ ನನ್ನ ಸ್ವಾಮಿಗೆ ಆಭರಣಗಳೂ ಅಗಣಿತವಾಗಿವೆ, ನಾಮಾವಳಿಯೂ ಅಸಂಖ್ಯಾತವಾದುದು. ದಿವ್ಯಮಂಗಳವಿಗ್ರಹವೂ ಅನೇಕ ವಿಧವಾದುದು. ಪಂಚಜ್ಞಾನೇನ್ದ್ರಿಯಜನ್ಯವಾದ ಸುಖವೂ ಅಪಾರವಾದುದು. ಆಯಾ ವಸ್ತುವಿಷಯಕವಾದ ಜ್ಞಾನವೂ ಅನನ್ತವಾದುದು. (ಇನ್ತಹ ಅನನ್ತ ವೈಭವವುಳ್ಳ ಸರ್ವೇಶ್ವರನೇ ನನ್ನೊಡನೆ ಸಂಶ್ಲೇಷಿಸಿದನೆಂದು ಭಾವವು.)

(೭) ಪಾಮ್ಬಣೈಮೇಲ್ ಪಾಱ್ಕಡಲುಳ್ ಪಳ್ಳಿಯಮರ್ನ್ದದುವುಮ್,
ಕಾಮ್ಬನೈತೋಳ್ ಪಿನ್ನೈಕ್ಕಾಯೇಱುಡನೇೞ್ ಶೆಱ್ಱದುವುಮ್,
ತೇಮ್ಬಣೈಯ ಶೋಲೈ ಮರಾಮರಮೇೞೆಯ್ದದುವುಮ್,
ಪೂಮ್ಬಿಣೈಯ ತಣ್ಡುೞಾಯ್ ಪೊನ್ಮುಡಿಯಮ್ ಪೋರೇಱೇ.

ಪ್ರ|| ಪಾಱ್ಕಡಲುಳ್–ಕ್ಷೀರಸಮುದ್ರದಲ್ಲಿ, ಪಾಮ್ಬಣೈಮೇಲ್– ಶೇಷಶಯನದ ಮೇಲೆ, ಪಳ್ಳಿ–ಶಯನಮಾಡೋಣವನ್ನು, ಅಮರ್ನ್ದದುವುಮ್–ಹೊಂದಿ ಇರೋಣವೂ, ಕಾಮ್ಬಣ್ಣೈ–ಬೊಂಬಿನಂತೆ ನುಣ್ಣಗೆ ದಪ್ಪವಾಗಿರುವ, ತೋಳ್–ತೋಳುಗಳುಳ್ಳ, ಪಿನ್ನೈಕ್ಕಾಯ್–ನಪ್ಪಿನ್ನೈಯೆಂಬ ನೀಳಾದೇವಿಗೋಸ್ಕರ, ಏಱ್ಱು–ಏಳು ವೃಷಭಗಳನ್ನೂ, ಉಡನ್–ಒಂದೇಕ್ಷಣದಲ್ಲಿ ಒಟ್ಟಿಗೆ, ಶೆಱ್ಱದುವುಮ್–ಕೊಂದುದೂ, ತೇಮ್–ಜೇನನ್ನೂ, ಪಣ್ಣೈಯ–ಕೊಂಬೆಗಳನ್ನೂ ಉಳ್ಳ, ಶೋಲೈ–ತೋಪುಗಳಾಗಿ ಬೆಳೆದಿದ್ದ, ಮರಾಮರಮ್ ಏೞ್–ಸಪ್ತಸಾಲವೃಕ್ಷಗಳನ್ನೂ, ಎಯ್ದದುವುಮ್–ನಾಶಪಡಿಸಿದುದೂ, ಪೂ (ಮ್) – ರಮಣೀಯವಾದ, ಪಿಣೈಯ – ರಚನೆಗಳುಳ್ಳ, ತಣ್–ಶೀತಳವಾದ, ತುೞಾಯ್–ತುಳಸಿಯಿಂದ ಅಲಂಕೃತವಾಗಿ, ಪೊನ್–ಸ್ವರ್ಣಮಯವಾಗಿ ಅತ್ಯುಜ್ಜ್ವಲವಾದ, ಮುಡಿ–ಕಿರೀಟವುಳ್ಳ, ಅಮ್–ದರ್ಶನೀಯವಾದ, ಪೋರ್–ಯುದ್ಧಕ್ಕೆ ತಕ್ಕ ವೀರ್ಯವುಳ್ಳ, ಏಱ್ಱು ಏ–ವೃಷಭದಂತಿರುವ ವಸ್ತುವೂ ಆ (ನನ್ನ ಸಂಶ್ಲೇಷವಂಮಾಡಿದ) ಭಗವನ್ತನೇ !

( ಸ–ಗಾ-ರ || )—

ಕ್ಷೀರಾಬ್ಧೌ ಶಯನಂ ಚ ಶೇಷಶಯನೇ ನೀಳಾರ್ಥಮೇವಾದ್ಭುತಃ
ಖ್ಯಾತಸ್ಸಪ್ತವೃಷಪ್ರಹಾರ ಇಹ ಯೋಽಭೂತ್ಸಪ್ತಸಾಲಾಹತಿಃ |
ತತ್ಸರ್ವಂ ಕೃತವಾನ್ ಮದರ್ಥಮಯಮೇವಾತ್ಯನ್ತರಮ್ಯಾಕೃತಿಃ
ವಿಷ್ಣುಶ್ಶ್ರೀವೃಷವೀರ್ಯಭಾಕ್ ಚ ತುಲಸೀಮಾಲಾಕಿರೀಟೋಜ್ಜ್ವಲಃ ||

ತಾ|| ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿರೋಣವೂ, ನೀಳಾದೇವಿಗೋಸ್ಕರ ಸಪ್ತವೃಷಭಗಳನ್ನು ಸಂಹರಿಸೋಣವೂ, ಸಪ್ತಸಾಲವೃಕ್ಷಚ್ಛೇದನವೂ, ಇವೆಲ್ಲವೂ (ನನ್ನೊಡನೆ ಸಂಶ್ಲೇಷಿಸಿ ನನಗೆ ಭೋಗ್ಯವಾಗುವಂತೆಯೇ ರಾಮಕೃಷ್ಣಾದ್ಯವತಾರಗಳಲ್ಲಿ) ದಿವ್ಯಕಿರೀಟಧಾರಿಯಾದ ಬಲಿಷ್ಠವಾದ ವೃಷಭದಂತೆ ವೀರ್ಯವುಳ್ಳ ಸುನ್ದರನಾದ ನನ್ನ ಸ್ವಾಮಿಯಿಂದ ಮಾಡಲ್ಪಟ್ಟುವು—ಎಂದು ಕೃತಜ್ಞತೆಯಿಂದ ಆ ದಿವ್ಯಚೇಷ್ಟಿತಗಳನ್ನು ಸ್ಮರಿಸುವ ಭಾವವು.

(೮) ಪೊನ್ಮುಡಿಯಮ್ ಪೋರೇಱ್ಱೈ ಯೆಮ್ಮಾನೈ
ನಾಲ್ ತಡನ್ತೋಳ್,
ತನ್ಮುಡಿವೊನ್ಱಿಲ್ಲಾದ ತಣ್ತುೞಾಯ್ ಮಾಲೈಯನೈ,
ಎನ್ಮುಡಿವು ಕಾಣಾದೇ ಯೆನ್ನುಳ್ ಕಲನ್ದಾನೈ,
ಶೊನ್ಮುಡಿವು ಕಾಣೇನ್ ನಾನ್ ಶೊಲ್ಲುವದೆನ್ ಶೊಲ್ಲೀರೇ.

ಪ್ರ|| ಪೊನ್-ಸುವರ್ಣಮಯವಾದ, ಮುಡಿ – ಕಿರೀಟವುಳ್ಳ, ಅಮ್‌ಪೋರ್ ಏಱಿಱ್ಱು-ರಮ್ಯವಾದ ವೀರವೃಷಭದಂತಿರುವ, ಎಮ್ಮಾನ್ನೈ-ನನ್ನ ಸ್ವಾಮಿಯನ್ನು, ನಾಲ್‌ತಡಮ್ ತೋಳ್ – ನಾಲ್ಕು ದೀರ್ಘಬಾಹುಗಳುಳ್ಳ, ತಱಮುಡಿವು ಒನ್ಱು ಇಲ್ಲಾದ-ತನ್ನ ಮಹಿಮೆಗೆ ಅನ್ತ್ಯವಿಲ್ಲದವನಾದ, ತಣ್‌ತುೞಾಯ್ ಮಾಲೈಯನ್ನೈ-ಶೀತಳವಾದ ತುಳಸೀಮಾಲೆಯನ್ನು ಧರಿಸಿರುವ, ಎಱಮುಡಿವುಕಾಣಾದೇ – ನನ್ನ ನೈಚ್ಯದ ಅನ್ತ್ಯವನ್ನು ಕಾಣದೆ, ಎಱ ಉಳ್‌ಕಲನ್ದಾನ್ನೈ-ನನ್ನ ಮನಸ್ಸಿನಲ್ಲಿ ಸೇರಿದವನನ್ನು, ನಾಱ-ನಾನು, ಶೊಲ್‌ಮುಡಿವುಕಾಣ್ಗೇಱ-ವರ್ಣಿಸುವ ಪ್ರಕಾರವನ್ನು ಕಾಣೆನು; ಎಱಶೊಲ್ಲುವದು-ಏನುಹೇಳಬೇಕೋ ಅದನ್ನು, ಶೊಲ್ಲೀರ್-ನೀವೇ ಹೇಳಿರಿ.

( ಸ-ಗಾ-ರ || )—

ದೀಪ್ರೋತ್ತುಂಗಕಿರೀಟಧಾರಿಣಮತುಲಂ ವೀರಂ ಚ ಮೇ ನಾಯಕಂ
ರಮ್ಯಾಜಾನುಚತುರ್ಭುಜಂ ನಿರವಧಿಶ್ರೀಕಂ ತುಲಸ್ಯಾಞ್ಚಿತಮ್ |
ನೀಚೇನಾಪಿ ಮಯಾಽದ್ಯ ಸಙ್ಗತಮಹಂ ಕಿಂ ವರ್ಣಯಾಮಿ ಸ್ವಯಂ
ವಾಚಾ ? ಹನ್ತ ! ನ ಗೋಚರೋಽಸ್ತಿ ವಚಸಃ ! ಕಿಂ ಬ್ರೂತ
ಯೂಯಂ ಸ್ವಯಮ್ ? ||

ತಾ|| ವೀರಾಗ್ರಗಣ್ಯನಾಗಿಯೂ, ದಿವ್ಯಕಿರೀಟಧಾರಿಯಾಗಿಯೂ, ಆಜಾನು ದೀರ್ಘಚತುರ್ಭುಜನಾಗಿಯೂ, ಅಪಾರಮಹಿಮನಾಗಿಯೂ, ದಿವ್ಯತುಳಸೀ ಮಾಲಾಂಚಿತನಾಗಿಯೂ ಇರುವ ನನ್ನ ಸ್ವಾಮಿಯು ನೀಚನಾದ ನನ್ನೊಡನೆ ಸಂಶ್ಲೇಷಿಸಿದ ಪ್ರಕಾರವನ್ನು ನಾನು ಹೇಗೆ ವಾಚಾವರ್ಣಿಸಲಾದೀತು? ನನ್ನ ವಾಕ್ಕಿಗೆ ಅದ ಗೋಚರವಲ್ಲ. ಏನುಹೇಳಬೇಕೋ ಅದನ್ನು ನೀವೇ ಹೇಳಿರಿ—ನೋಡೋಣ (ಅವನ ಈ ಸೌಶೀಲ್ಯವು ಅಪಾರವಾದುದರಿಂದ ವರ್ಣಿಸಲಶಕ್ಯವೆಂದು ಭಾವವು.) .

(೯) ಶೊಲ್ಲೀರೆನ್ನಮ್ಮಾನ್ನೈ ಯೆನ್ನಾವಿ ಯಾವಿ ತನ್ನೈ,
ಎಲ್ಲೈಯಿಲ್ ಶೀರೆನ್ಕರುಮಾಣಿಕ್ಕ ಚ್ಚುಡರ್ರೈ,
ನಲ್ಲವಮುದಮ್ ಪೆಱಱ್ಕರಿಯ ವೀಡುಮಾಯ್,
ಅಲ್ಲಿಮಲರ್ ವಿರೈಯೊತ್ತಾನ್ಎಲ್ಲನ್ ವಣ್ಣನ್ನೇ.

ಪ್ರ|| ಎಱ ಅಮ್ಮಾನ್ನೈ – ನನ್ನ ಸ್ವಾಮಿಯನ್ನು, ಎಱ ಆವಿ ಆವಿತನ್ನೈ – ನನ್ನ ಆತ್ಮನಿಗೆ ಆತ್ಮನಾದವನನ್ನು, ಎಲ್ಲೈಯಿಲ್–ಎಲ್ಲೆಯಿಲ್ಲದ, ಶೀರ್–ಕಲ್ಯಾಣಗುಣಗಳುಳ್ಳ, ಎಱ ಕರುಮಾಣಿಕ್ಕಚ್ಚುಡರ್ರೈ-ನನ್ನ ನೀಲರತ್ನದಂತೆ ಜ್ಯೋತಿರ್ಮಯನಾದವ

ನೆನ್ನು, ಶೊಲ್ಲೀರ್-ಸ್ತೋತ್ರಮಾಡಿರಿ; ನಲ್ಲ ಅಮುದನ್-ದಿವ್ಯತಮವಾದ ಅಮೃತವಾಗಿ, ಪೆಱ್ಱು ಅರಿಯ-ಹೊಂದಲು ಅಶಕ್ಯವಾದ, ವೀಡುಮಾಯ್ – ಮೋಕ್ಷಸ್ಥಾನಕ್ಕೆ ನಿರ್ವಾಹಕನಾಗಿಯೂ, ಅಲ್ಲಿಮಲರ್-ತಾವರೆಹೂವಿನಲ್ಲಿರುವ, ವಿರೈ ಒತ್ತು –ಪರಿಮಳದಂತೆ ಭೋಗ್ಯತಮನಾಗಿಯೂ ಇರುವ ಅವನು, ಆಣಲ್ಲ-ಪುರುಷೋತ್ತಮನಾಮದರಿಂದ ಪುರುಷರಿಗಿಂತ ವಿಲಕ್ಷಣನು, ಪೆಣ್ಣಲ್ಲ-ಪುಂಸ್ತ್ವಭೂಯಿಷ್ಠನಾದುದರಿಂದ ಸ್ತ್ರೀಯರಿಗಿಂತ ವಿಲಕ್ಷಣನು.

( ಸ-ಗಾ-ರ ॥ )—

ಯೂಯಂ ಕೀರ್ತಯತಾಚ್ಯುತಂ ಮಮ ವಿಭುಂ ಚಾತ್ಮಾನಮಪ್ಯಾತ್ಮನೋ
ನಿಸ್ಸೀಮಾಖಿಲಸದ್ಗುಣಂ ಮಣಿನಿಭಂ ಜ್ಯೋತಿಶ್ಚ ದಿವ್ಯಾಮೃತಮ್ ।
ಮೋಕ್ಷಸ್ಯಾಪಿ ಪರಂ ಪದಂ ತ್ವಸುಲಭಂ ತಂ ಯೋಗಿನಾಮಪ್ಯಹೋ !
ಪದ್ಮಾನ್ತಶ್ಚ ಸುಗನ್ಧಿ ಬೀಜಮತುಲಂ ನಾರೀನರೇಭ್ಯಃ ಪರಮ್ ॥

ತಾ॥ ನಿಸ್ಸೀಮಕಲ್ಯಾಣಗುಣನಿಧಿಯಾಗಿಯೂ ನೀಲಮಣಿವರ್ಣನಾಗಿಯೂ ಇರುವ ಜ್ಯೋತಿರ್ಮಯನಾದ ಭಗವನ್ತನೇ ನನ್ನ ಸ್ವಾಮಿಯಾಗಿ ನನ್ನೊಡನೆ ಸಂಶ್ಲೇಷಿಸಿ ನನಗೆ ಅನ್ತರಾತ್ಮನಾಗಿಯೂ ಇದಾನೆ. ದಿವ್ಯಾಮೃತಪ್ರಾಯನಾಗಿಯೂ, ಮೋಕ್ಷಸಾಮ್ರಾಜ್ಯಾಧಿಪತಿಯಾಗಿಯೂ, ಭೋಗ್ಯತಮನಾಗಿಯೂ ಇರುವ ಅವನೇ ಪುರುಷರಿಗಿಂತಲೂ ಸ್ತ್ರೀಯರಿಗಿಂತಲೂ ವಿಲಕ್ಷಣನಾದ ಪುರುಷೋತ್ತಮನು. (ಇನ್ತಹ ಕಲ್ಯಾಣಗುಣವಿಶಿಷ್ಟನನ್ನು) ನೀವು ಸ್ತೋತ್ರಮಾಡಿರಿ.

(೧೦) ಆಣಲ್ಲನ್ ಪೆಣ್ಣಲ್ಲನಲ್ಲಾ ವಲಿಯುಮಲ್ಲನ್,
ಕಾಣಲುಮಾಕಾ ನುಳನಲ್ಲ ನಿಲ್ಲೊ ಯಲ್ಲನ್,
ಪೇಣುಮ್ಕಾಲ್ ಪೇಣುಮುರುವಾಕು ಮಲ್ಲನುಮಾಮ್,
ಕೋಣೈಪೆರಿದುಡ್ತ್ತೆಮ್ ಪೆಮ್ಮಾನೈ ಕ್ಕೂಱುದಲೇ.

ಪ್ರ॥ ಆಣ್ ಅಲ್ಲ-ಪುರುಷರೂಪವೂ ಇಲ್ಲದವನಾಗಿ, ಪೆಣ್ ಅಲ್ಲ-ಸ್ತ್ರೀರೂಪವೂ ಇಲ್ಲದವನಾಗಿ, ಅಲ್ಲಾ ಅಲಿಯುಮ್ ಅಲ್ಲ-ತದ್ಭಿನ್ನವಾಗಿ (ಅಪ್ರಯೋಜಕವಾದ) ನಪುಂಸಕವೂ ಅಲ್ಲದೆ, ಕಾಣಲುಮ್ – ನೋಡುವುದಕ್ಕೂ, ಆಕಾ- ಅಸಾಧ್ಯನಾಗಿ, ಉಳನಲ್ಲ-(ಪ್ರತಿಕೂಲರಿಗೆ) ಸ್ಥಿತಿರಹಿತನಾಗಿಯೂ, ಇಲ್ಲೈ ಅಲ್ಲನ್ – (ಅನುಕೂಲರಿಗೆ) ಇಲ್ಲದವನಲ್ಲವಾಗಿಯೂ (ಸ್ಥಿತಿಸಹಿತನಾಗಿಯೂ), ಪೇಣುಮ್ಕಾಲ್-(ಆಶ್ರಿತರು) ಆದರಿಸುವ ಕಾಲದಲ್ಲಿ, ಪೇಣುಮ್ ಉರುವಾಕುಮ್

–ಅವರಿಗೆ ಇಷ್ಟವಾದ ವಿಗ್ರಹರೂಪವುಳ್ಳವನಾಗಿ, ಅಲ್ಲನುಮಾಮ್–ಅನ್ತಹ ರೂಪವಿಲ್ಲದವನಾಗಿಯೂ, (ಇರುವ) ಎಮ್ ಪೆಮ್ಮಾನೈ–ನನ್ನ ಸ್ವಾಮಿಯನ್ನು, ಕೂಱುದಲ್–ಸ್ತೋತ್ರಮಾಡೋಣವು, ಪೆರಿದುಕೋಣ್ಡೈ ಉಡೈತ್ತು–ಅತ್ಯನ್ತ ಪ್ರಯಾಸಸಾಧ್ಯವಾದುದು.

( ಸ–ಗಾ–ರ || ) —

**ನ ಸ್ತ್ರೀ ನಾಪಿ ಪುಮಾನ್ನ ಷಣ್ಢ ಇತಿ ಚ ಪ್ರಾಮಾಣ್ಯವಶ್ಯೋ ನ ಹಿ**
**ಸ್ವಾಮೀ ಮೇ ನ ಹಿ ಚಾಸ್ತ್ಯಸನ್ ನ ಖಲು ಸನ್ ಭಕ್ತಾತ್ಮನಾಂ ಸುಪ್ರಿಯಃ|**
**ತೇಷಾಂ ಚಾಭಿಮತೋರುದೇಹ ಇತರೋಽಪ್ಯಸ್ತೀ ಸ್ವಯಂ ಶ್ರೀಹರಿ–**
**ಸ್ತಂ ಚೈನಂ ನ ಹಿ ಶಕ್ತಿರಸ್ತಿ ವಚಸಾ ವಕ್ತುಂ! ನ ವಕ್ತುಂ ಚ ಮೇ ||**

ತಾ|| ಸ್ತ್ರೀರೂಪ–ಪುರುಷರೂಪ–ಷಣ್ಢರೂಪಗಳಲ್ಲಿ ಯಾವರೂಪವೂ ಇಲ್ಲದವನಾಗಿಯೂ, ಪ್ರಮಾಣಗಳಿಗೆ ಅದೃಶ್ಯನಾಗಿಯೂ, ಸದಸದ್ವಿಲಕ್ಷಣನಾಗಿಯೂ, ಭಕ್ತರಿಗೆ ಇಷ್ಟವಾದ ವಿಗ್ರಹರೂಪಿಯಾಗಿಯೂ, ತದ್ಭಿನ್ನನಾಗಿಯೂ ಇರುವ ನನ್ನ ಸ್ವಾಮಿಯನ್ನು ಸ್ತೋತ್ರಮಾಡೋಣವು ಅತ್ಯನ್ತ ದುಷ್ಕರವಾದುದು. (ನನ್ನೊಡನೆ ಸಂಶ್ಲೇಷಿಸಿದ ಇವನ ಸೌಶೀಲ್ಯವನ್ನು ವರ್ಣಿಸಲು ಯಾರಿಗೂ ಶಕ್ತಿಯಿಲ್ಲವೆಂದು ಭಾವವು.)

(೧೧) ಕೂಱುದಲೊನ್ಱಾರಾ ಕ್ಕುಡಕ್ಕೂತ್ತವಮ್ಮಾನೈ–
ಕ್ಕೂಱುದಲೇ ಮೇವಿ ಕ್ಕುರುಕೂರ್ ಚ್ಚಡಕೋಪನ್,
ಕೂಱಿನ ವನ್ದಾದಿ ಯೋರಾಯಿರತ್ತುಳಿಪ್ಪತ್ತುಮ್,
ಕೂಱುದಲ್ ವಲ್ಲಾರುಳರೇಲ್ ಕೂಡುವರ್ ವೈಕುನ್ದಮೇ.

ಪ್ರ|| ಒನ್ಱು–ಒಂದು ಗುಣವನ್ನು, ಕೂಱುದಲ್ – ಹೇಳೋಣವೂ, ಆರಾ–ಸಾಧ್ಯವಾಗದಂತಿರುವ, ಕುಡಕ್ಕೂತ್ತ–ಘಟಲೀಲೆಯುಳ್ಳ, ಅಮ್ಮಾನೈ–ಸ್ವಾಮಿಯನ್ನು, ಕೂಱುದಲೇಮೇವಿ–ಸ್ತೋತ್ರಮಾಡಲುದ್ದೇಶಿಸಿ, ಕುರುಕೂರ್ ಶಡಕೋಪನ್–ಶ್ರೀಕುರುಕಾಪುರಿಯ ನಮ್ಮಾೞ್ವಾರರು, ಕೂಱಿನ–(ಗ್ರನ್ಥರೂಪವಾಗಿ) ಹೇಳಿದ, ಅನ್ದಾದಿ ಓರ್ ಆಯಿರತ್ತುಳ್–ಅನ್ದಾದಿರೂಪವಾಗಿ ಅದ್ವಿತೀಯವಾದ ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್–ಈ ದಶಕವನ್ನು, ಕೂಱುದಲ್ ವಲ್ಲಾರ್–ಹೇಳಬಲ್ಲವರು (ಪಠಿಸಲರ್ಹರು), ಉಳರೇಲ್ ಇದ್ದರೆ, ವೈಕುನ್ದಮ್–ಪರಮಪದವನ್ನು, ಕೂಡುವರ್–(ಅವರು) ಸೇರುವರು.

ಶ್ರೀಃ

# ದ್ವಿತೀಯಶತಕದಲ್ಲಿ—ಷಷ್ಠದಶಕ.

(ವೈಕುನ್ದಾ ಮಣಿವಣ್ಣನೇ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಅತಿನೈಚ್ಯವನ್ನು ನೋಡಿ ಭಗವಂತನಿಗೆ ಅತಿಶಂಕೆಯುಂಟಾಯಿತೆಂದು ತಿಳಿದು ತತ್ಪರಿಹಾರಾರ್ಥವಾಗಿ "ನಾನು ಎಂದಿಗೂ ನನ್ನ ಸ್ವಾಮಿಯಾದ ನಿನ್ನನ್ನು ಬಿಡುವುದಿಲ್ಲ"— ಎಂದು ಪ್ರತಿಜ್ಞೆ ಮಾಡುತ್ತಾರೆ.)

---

(೧) ವೈಕುನ್ದಾ ಮಣಿವಣ್ಣನೇ ಯೆನ್ಪೊಲ್ಲಾತ್ತಿರುಕ್ಕುಱಳಾ
ಯೆನ್ನುಳ್ ಮನ್ನಿ,
ವೈಕುಮ್ ವೈಕಲ್‌ತೋಱುಮಮುದಾಯ ವಾನೇಱೇ,
ಶೆಯ್‌ಕುನ್ದಾ ವರುಮ್ ತೀಮೈ ಯುನ್ನಡಿಯಾರ್ಕ್ಕು
ತ್ತೀರ್ತ್ತಸುರರ್ಕ್ಕುತ್ತೀಮೈಕಳ್,
ಶೆಯ್‌ಕುನ್ದಾವುನ್ನೈ ನಾನ್ ಪಿಡಿತ್ತೇನ್ ಕೊಳ್ ಶಿಕ್ಕನವೇ.

ಪ್ರ|| ವೈಕುನ್ದಾ – ಪರಮಪದನಾಥನೇ, ಮಣಿವಣ್ಣನೇ ನೀಲರತ್ನದಂತೆ ವರ್ಣವುಳ್ಳವನೇ, ಎನ್–ನನ್ನ, ಪೊಲ್ಲಾ–ರಮ್ಯವಾದ, ತಿರುಕ್ಕುಱಳಾ–ವಾಮನ ರೂಪವುಳ್ಳವನೇ, ಎನ್ನುಳ್–ನನ್ನ ಮನಸ್ಸಿನಲ್ಲಿ, ಮನ್ನಿ–ಸ್ಥಿರಸಂಶ್ಲೇಷವಂಮಾಡಿ, ವೈಕುಮ್–ಇರುವ, ವೈಕಲ್‌ತೋಱುಮ್ – ಕಾಲದಲ್ಲೆಲ್ಲಾ, ಅಮುದು ಆಯ– ಅಮೃತವಾಗಿರುವ (ನಿತ್ಯಭೋಗ್ಯವಾಗಿರುವ), ವಾನೇಱೇ – ನಿತ್ಯಸೂರೀಶ್ವರನೇ, ಶೆಯ್–ಮಾಡಲ್ಪಟ್ಟು, ಕುನ್ದಾ–ಕಮ್ಮಿಯಾಗದೆ ಪ್ರಬಲವಾಗಿರುವ, ಅರುಮ್– ಅಪರಿಹಾರ್ಯವಾದ, ತೀಮೈ – ದುಷ್ಕೃತ್ಯಗಳನ್ನು, ಉನ್ ಅಡಿಯಾರ್ಕ್ಕು – ನಿನ್ನ ಭಕ್ತರಿಗೆ, ತೀರ್ತ್ತು–ನಾಶಪಡಿಸಿ, ಅಸುರರ್ಕ್ಕು – ಅಸುರರಿಗೆ (ಅನಾಶ್ರಿತರಿಗೆ), ತೀಮೈಕಳ್–ಅನರ್ಥಗಳನ್ನು, ಶೆಯ್–ಉಂಟುಮಾಡುವ, ಕುನ್ದಾ–ಕುಂತಾಯುಧವುಳ್ಳವನೇ, ಉನ್ನೈ–(ಇಂತಹ) ನಿನ್ನನ್ನು, ನಾನ್–ನಾನು, ಶಿಕ್ಕೆನ–ದೃಢವಾಗಿ (ಸ್ಥಿರವಾಗಿ), ಪಿಡಿತ್ತೇನ್ ಕೊಳ್–ಹಿಡಿದು (ಆಶ್ರಯಿಸಿ) ಇರುತ್ತೇನೆಂದು ತಿಳಿ.

( ಸ-ಗಾ-ರ || ) —

ವೈಕುಣ್ಠಾಸಿ ಮಣಿಪ್ರಭಃ ಕಿಲ ಮಮ ಶ್ರೀವಾಮನ ! ತ್ವಂ ಪ್ರಿಯ-
ಸ್ಸಂಶ್ಲೇಷಂ ಮಯಿ ಸನ್ದಧಾಸಿ ಸತತಂ ದಿವ್ಯಾಮೃತಾತ್ಮಾ ಮಹಾನ್ |
ಸಮ್ಪೂರ್ಣೋಽಸಿ ಫಲಪ್ರದಶ್ಚ ನಮತಾಂ ಘೋರಾಘಹನ್ತಾ ಹರೇ !
ದುಷ್ಟಾನಾಮಸಿ ಕುನ್ತವಕ್ತ್ರಮಥನಶ್ಚ ತ್ವಾಂ ಸಂಶ್ರಿತೋಽಸ್ಮಿ ಸ್ಥಿರಮ್ ||

ತಾ|| ಎಲೈ ವೈಕುಣ್ಠನಾಥನೇ! ಮಣಿವರ್ಣನೇ ! ದಿವ್ಯವಾಮನಸ್ವರೂಪನೇ ! ನನ್ನಲ್ಲಿ ನಿತ್ಯಸಂಶ್ಲೇಷವಂಮಾಡಿರುವ ಅಮೃತಸ್ವರೂಪಿಯಾದ ನಿತ್ಯಸೂರೀಶ್ವರನೇ! ಆಶ್ರಿತರಾದ ಭಕ್ತರಿಗೆ ಸಕಲ ಪಾಪಧ್ವಂಸಕನಾಗಿಯೂ ದುಷ್ಟರಾದ ಅಸುರರಿಗೆ ಅನರ್ಥಜನಕನಾಗಿಯೂ ಇರುವ ನಿನ್ನನ್ನು ನಾನು ದೃಢವಾಗಿ ಆಶ್ರಯಿಸಿರುತ್ತೇನೆಂಬುದನ್ನು ನೀನು ನಂಬು-(ಎಂದು ತಮ್ಮ ಮನೋದಾರ್ಢ್ಯವನ್ನು ಭಗವನ್ತನಿಗೆ ತಿಳಿಯಪಡಿಸುತ್ತಾರೆ.)

(೨) ಶಿಕ್ಕೆನ ಚ್ಚಿಱಿದೋರಿಡಮುಮ್ ಪುಱಪ್ಪಡಾ ತ್ತನ್ನುಳ್ಳೇ,
ಉಲಕುಕಳ್
ಒಕ್ಕವೇ ವಿೞುಙ್ಗಿ, ಪ್ಪುಕುನ್ದಾನ್, ಪುಕುನ್ದದಱ್ಪಿನ್
ಮಿಕ್ಕಞಾನವೆಳ್ಳ ಚ್ಚುಡರ್ವಿಳಕ್ಕಾಯ್, ತ್ತುಳಕ್ಕಱ್ಱು
ಅಮುದಮಾಯ್, ಎಙ್ಗುಮ್
ಪಕ್ಕನೋಕ್ಕಱಿಯಾನೆನ್ ಪೈನ್ದಾಮರೈ ಕ್ಕಣ್ಣನೇ.

ಪ್ರ|| ಶ್ಚಿಱಿದು ಓರ್-ಅತ್ಯಲ್ಪವಾದ, ಇಡಮುಮ್-ಸ್ಥಲವೂ, ಪ್ಪುಱಪ್ಪಡಾ-ಹೊರಗೆ ಆಗದಂತೆ, ಉಲಕುಕಳ್-ಲೋಕಗಳನ್ನು, ತನ್ನುಳ್ಳೇ-ತನ್ನೊಳಗೇ, ಒಕ್ಕ-ಸಮವಾಗಿ, ವಿೞುಙ್ಗಿ-ಅಡಗಿಸಿಕೊಂಡು, ಶಿಕ್ಕೆನ-ದೃಢವಾಗಿ (ಸ್ಥಿರವಾಗಿ), ಪುಕುನ್ದಾನ್-(ನನ್ನೊಳು) ಪ್ರವೇಶಿಸಿದನು; ಪುಕುನ್ದದಱ್ಪಿನ್-ಪ್ರವೇಶಿಸಿದ ಅನನ್ತರ, ಮಿಕ್ಕ-ಅಪಾರವಾದ, ಞಾನವೆಳ್ಳಮ್-ಜ್ಞಾನಪೂರ್ತಿಯೆಂಬ, ಶುಡರ್-ತೇಜೋಮಯವಾದ, ವಿಳಕ್ಕಾಯ್ ಜ್ಯೋತಿಸ್ಸ್ವರೂಪನಾಗಿ, ತುಳಕ್ಕಮ್-ಕಂಪವು (ಚಾಂಚಲ್ಯವು), ಅಱ್ಱು-ಹೋಗಿ, ಅಮುದಮಾಯ್-ಅಮೃತದಂತೆ ಭೋಗ್ಯತಮನಾಗಿ, ಎನ್-ನನ್ನ, ಪೈ-ರಮಣೀಯವಾದ, ತಾಮರೈ - ತಾವರೆಹೂವಿನಂತೆ ಇರುವ, ಕಣ್ಣನ್-ಕಣ್ಣುಗಳುಳ್ಳವನು, ಎಙ್ಗುಮ್-ಎಲ್ಲಿಯೂ, ಪಕ್ಕಮ್-ಪಾರ್ಶ್ವದಲ್ಲಿ, ನೋಕ್ಕ-ನೋಡಲು, ಅಱಿಯಾನ್-ಶಕ್ತನಲ್ಲ (ನನ್ನನ್ನು ಬಿಟ್ಟು ಇನ್ನು ಯಾವ ಕಡೆಗೂ ದೃಷ್ಟಿಯುಳ್ಳವನಲ್ಲ.)

( ಸ-ಗಾ-ರ ॥ )—

ಈಷದ್ವಾಽಪಿ ನ ಹಿ ತ್ಯಜೇದ್ಬಹಿರಹೋ ! ಲೋಕಾನಶೇಷಾನ್ ವಹನ್

ಸ್ವಸ್ಮಿನ್ನೇವ ಕಿಲ ಸ್ವಯಂ ಮಯಿ ವಿಶನ್ ಜ್ಞಾನಪ್ರಭಾಭಾಸ್ವರಃ ।

ತೇಜೋರಾಶಿರುದಾರಸದ್ಗುಣನಿಧಿರ್ದಿವ್ಯಾಮೃತಾತ್ಮಾ ಹರಿಃ

ಪ್ರತ್ಯಕ್ಷೋ ಮಮ ನಾಯಕೋಽನ್ಯಪರತಾಂ ಸನ್ತ್ಯಜ್ಯ ಮಯ್ಯಾಸ್ಥಿತಃ ॥

ತಾ॥ ಸಪ್ತಲೋಕಗಳನ್ನೂ ತನ್ನೊಳು ಅಡಗಿಸಿಕೊಂಡು ನನ್ನೊಳು ದೃಢವಾಗಿ ಪ್ರವೇಶಿಸಿದ ಭಗವನ್ತನು ಹೀಗೆ ಪ್ರವೇಶಿಸಿದಮೇಲೆ ದಿವ್ಯತೇಜೋಮಯನಾಗಿಯೂ, ಜ್ಞಾನಪ್ರಭಾಭಾಸ್ವರನಾಗಿಯೂ, ಅಕಂಪ್ಯನಾಗಿಯೂ, ನಿರತಿಶಯಾನನ್ದಾಮೃತಸ್ವರೂಪನಾಗಿಯೂ ಪ್ರಕಾಶಿಸುತ್ತ, ರಮಣೀಯವಾದ ತನ್ನ ದಿವ್ಯನೇತ್ರಾರವಿನ್ದಗಳಿಂದ ನನ್ನನ್ನೇ ಕಟಾಕ್ಷಿಸುತ್ತ ಅನ್ಯತ್ರ ದೃಷ್ಟಿಯೇ ಇಲ್ಲದೆ ನಿತ್ಯಸನ್ತುಷ್ಟನಾಗಿದಾನೆಂದು ಭಾವವು.

(೩) ತಾಮರೈಕ್ಕಣ್ಣನೈ ವಿಣ್ಣೋರ್ ಪರವುಮ್ ತಲೈಮಕನೈ,
ತ್ತುೞಾಯ್ ವಿರೈ-

ಪ್ಪೂಮರುವುಕಣ್ಣಿ ಯೆಮ್ಬಿರಾನೈ ಪ್ಪೊನ್ಮಲೈಯೈ,

ನಾಮರುವಿ ನನ್ಗೇತ್ತಿ ಯುಳ್ಳಿ ವಣಙ್ಗಿ ನಾಮ್ಮಕಿೞ್ನ್ದಾಡ, ನಾವಲರ್

ಪಾ ಮರುವಿ ನಿಱ್ಕ ತ್ತನ್ದ ಪೇರ್ನ್ನ್ರಿಯೇಯ್ ವಳ್ಳಲೇ.

ಪ್ರ॥ ತಾಮರೈಕ್ಕಣ್ಣನೈ-ತಾವರೆಹೂವಿನಂತೆ ಕಣ್ಣುಗಳುಳ್ಳ, ವಿಣ್ಣೋರ್-ನಿತ್ಯಸೂರಿಗಳು, ಪರವುಮ್-ಅನವರತ ಸ್ತೋತ್ರಮಾಡುವ, ತಲೈಮಕನೈ-ಮಾಹಾತ್ಮ್ಯವುಳ್ಳ ಸ್ವಾಮಿಯನ್ನು, ವಿರೈ-ಪರಿಮಳವೂ, ಪೂ-ಪುಷ್ಪವೂ, ಮರುವು-ಸೇರಿ ಹೊಂದಿ ಇರುವ, ತುೞಾಯ್‌ಕಣ್ಣಿ-ತುಳಸೀಮಾಲೆಯುಳ್ಳ, ಎಮ್ಬಿರಾನೈ-ನಮ್ಮ ಸ್ವಾಮಿಯನ್ನು, ಪೊನ್ಮಲೈಯೈ-(ನಮ್ಮೊಡನೆ ಸಂಶ್ಲೇಷದಿಂದ) ಸುವರ್ಣಗಿರಿಯಂತೆ ಉಜ್ಜ್ವಲನಾಗಿರುವವನನ್ನು, ನಾಮ್-ನಾವು, ಮರುವಿ-ಆಶ್ರಯಿಸಿ, ನನ್ಗು ಏತ್ತಿ-ಚೆನ್ನಾಗಿ ಸ್ತೋತ್ರಮಾಡಿ, ಉಳ್ಳಿ-ಧ್ಯಾನಮಾಡಿ (ಸ್ಮರಿಸಿ), ವಣಙ್ಗಿ-ನಮಸ್ಕರಿಸಿ, (ಹೀಗೆ) ನಾಮ್-ನಾವು, ಮಕಿೞ್ನ್ದು-ಆನನ್ದಿಸುತ್ತ, ಆಡ-ಸಂಭ್ರಮದೊಡನೆ ನರ್ತನಮಾಡುವಂತೆ, ನಾ-ನಾಲಿಗೆಯಲ್ಲಿ, ಅಲರ್-ವಿಕಾಸವನ್ನು ಹೊಂದಿ ಹೊರಡುವ, ಪಾ-ಪದ್ಯಗಳು, ಮರುವಿನಿಱ್ಕ-ದಿವ್ಯಪ್ರಬನ್ಧರೂಪವಾಗಿ ನಿಲ್ಲುವಂತೆ,

ತನ್ದ-ಉಪಕಾರಮಾಡಿದ, ಪಾನ್ಮೈ-ಸ್ವಭಾವವು, ಏಯ್-ಸೇರಿರುವ, ವಳ್ಳಲೇ-ಉದಾರಗುಣವಿಶಿಷ್ಟನೇ. (ಇಂತಹ ಸ್ವಾಮಿಯೇ ನನ್ನನ್ನು ಬಿಟ್ಟು ಬೇರೊಂದನ್ನು ಕಾಣೆನು.)

( ಸ--ಗಾ--ರ || )—

**ಪದ್ಮಾಕ್ಷಂ ದಿವಿ ನಿತ್ಯಸೂರಿನಿವಹೈಸ್ಸ್ತವ್ಯಂ ಮಮೈವ ಪ್ರಭುಂ**
**ಪುಷ್ಪೋದ್ಯತ್ತುಲಸೀಸ್ರಜಂ ಚ ಕನಕಾದ್ರಿಂ ಶ್ರೀಧರಂ ಸಾದರಮ್ |**
**ಸ್ತುತ್ವಾ ತಂ ಮನಸಾ ವಿಚಿನ್ತ್ಯ ವಪುಷಾ ಽಽನಮ್ಯ ಹೃಷ್ಟಾ ವಯಂ**
**ನೃತ್ಯಾಮೋಽದ್ಯ! ಸ ಏವ ಪದ್ಯರಚನೇ ಶಕ್ತಿಂ ಚ ಮೇಽದಾತ್ ಸ್ವಯಮ್||**

ತಾ|| ಕಮಲನಯನನಾಗಿಯೂ, ನಿತ್ಯಸೂರಿಸ್ತುತ್ಯನಾಗಿಯೂ, ದಿವ್ಯತುಲಸೀಮಾಲಾಲಂಕೃತನಾಗಿಯೂ, ಸ್ವರ್ಣಾದ್ರಿಯಂತೆ ಮಹೋಜ್ಜ್ವಲನಾಗಿಯೂ ಇರುವ ನಮ್ಮ ಸ್ವಾಮಿಯನ್ನು ನಾವು ಚೆನ್ನಾಗಿ ಸ್ತೋತ್ರಮಾಡಿ, ಚಿನ್ತಿಸಿ, ನಮಸ್ಕರಿಸಿ ಆನನ್ದಪಡುವಂತೆಯೂ ಸಸಂಭ್ರಮ ನರ್ತನಮಾಡುವಂತೆಯೂ ಅವನೇ ನಮ್ಮಲ್ಲಿ ಅನುಗ್ರಹಮಾಡಿ, ನನ್ನ ನಾಲಿಗೆಯೊಳು ರಮಣೀಯವಾದ ಪದ್ಯಗಳು (ಹೀಗೆ) ದಿವ್ಯಪ್ರಬನ್ಧರೂಪವಾಗಿ ಹೊರಡುವಂತೆ ಉಪಕಾರಮಾಡಿರುವ ಆ ಮಹೋದಾರ ಸ್ವಭಾವನ ಮಾಹಾತ್ಮ್ಯವು ಎಂತಹುದೋ! (ಅವನ ಪರಮೌದಾರ್ಯವು ಎಂತಹುದೋ! — ಎಂದು ಭಾವವು.)

(೪) ವಳ್ಳಲೇ ಮದುಶೂದನಾ, ಎನ್ಮರತಕಮಲೈಯೇ, ಉನ್ನೈ ನಿನೈ-
ನ್ದೆಳ್ಗಲ್ ತನ್ದ ಎನ್ದಾಯುನ್ನೈ ಯೆಙ್ಙನಮ್ ವಿಡುಕೇನ್,
ವೆಳ್ಳಮೇ ಪುರೈ ನಿನ್ಪುಕೞ್ ಕುಡೈನ್ದಾಡಿ ಪಾಡಿಕ್ಕಳಿತ್ತು
ಕನ್ದುಕನ್ದು,
ಉಳ್ಳ ನೋಯ್ಗಳೆಲ್ಲಾಮ್ ತುರನ್ದುಯ್ನ್ದು
ಪೋನ್ದಿರುನ್ದೇ.

ಪ್ರ|| ವಳ್ಳಲೇ-ಮಹೋದಾರ ಸ್ವಭಾವನೇ, ಮದುಶೂದನಾ - ಮಧುಸೂದನನೇ, ಎನ್ ಮರತಕಮಲೈಯೇ-ನನ್ನ ಮರಕತಮಣಿಪರ್ವತದಂತೆ ಉಜ್ಜ್ವಲನಾದವನೇ, ಉನ್ನೈನಿನೈನ್ದು-ನಿನ್ನನ್ನು ಸ್ಮರಿಸಿ, ಎಳ್ಗಲ್ ತನ್ದ-ಬೇರೆ ವಿಷಯಗಳನ್ನು ತಿರಸ್ಕರಿಸುವ ಸ್ವಭಾವವನ್ನು (ನನಗೆ) ಉಂಟುಮಾಡಿದ, ಎನ್ದಾಯ್-(ನನ್ನ) ಸ್ವಾಮಿಯೇ, ವೆಳ್ಳಮೇಪುರೈ - ಮಹಾಸಮುದ್ರದಂತೆ ಅಪರಿಚ್ಛಿನ್ನನಾದ,

ನೀಪುಕೞ್–ನಿನ್ನ ಗುಣಗಳಲ್ಲಿ, ಕುಡೈನ್ದು–ಮುಳುಗಿ, ಆಡಿಪ್ಪಾಡಿ–ಸಂಭ್ರಮದೊಡನೆ ಆಡುತ್ತಲೂ ಹಾಡುತ್ತಲೂ, ಕಳಿತ್ತು–ಆನನ್ದದಿಂದ ಮದವಿಶಿಷ್ಟನಾಗಿ, ಉೞನ್ದು ಕನ್ದು–ಮೇಲೆ ಮೇಲೆ ಉಕ್ಕಿಬರುವ ಸನ್ತೋಷವುಳ್ಳವನಾಗಿ, ಉಳ್ಳ ನೋಯ್ ಕಳೆಲ್ಲಾಮ್–ಉಂಟಾಗಿದ್ದ ದುಃಖಗಳನ್ನೆಲ್ಲಾ, ತುರನ್ದು–ತ್ಯಜಿಸಿ (ಧ್ವಂಸಮಾಡಿ), ಉಯ್‌ನ್ದು–ಉಜ್ಜೀವಿಸಿ, ಪೋನ್ದು ಇರುನ್ದು–ಬಂದು ನಿಂತು, ಉನ್ನೈ–(ಇಂತಹ) ನಿನ್ನನ್ನು, ಎಙ್ಙನಮ್ ವಿಡುಕೇ–ಹೇಗೆ ಬಿಡುವೆನು ?

( ಸ–ಗಾ-೮ || )—

**ನಿತ್ಯೋದಾರ ! ಮಮ ಪ್ರಭುಂ ಮರಕತಾದ್ರಿಂ ತ್ವಾಂ ಮಧುಧ್ವಂಸಿನಂ**
**ಸ್ಮೃತ್ವಾಽನ್ಯತ್ಸಕಲಂ ವಿಸೃಜ್ಯ ಸುಗುಣಾಮ್ಭೋಧೌ ನಿಮಗ್ನೋಽಸ್ಮಿ ತೇ |**
**ನೃತ್ಯನ್ ಗಾನಪುರಸ್ಸರಂ ಪ್ರಮುದಿತಃ ಪ್ರಧ್ವಸ್ತದುಃಖೋಽಧುನಾ**
**ಧನ್ಯೋಽಹಂ ತವ ಸನ್ನಿಧಾವನುಭವಂ ಪ್ರಾಪ್ಯ ತ್ಯಜಾಮ್ಯೇವ ಕಿಮ್ ? ||**

ತಾ॥ ಮಹೋದಾರಸ್ವಭಾವನಾಗಿ ಮರಕತಪರ್ವತದಂತೆ ಉಜ್ಜ್ವಲನಾಗಿರುವ ಮಧುಸೂದನನೇ ! ನಿನ್ನನ್ನು ಸ್ಮರಿಸಿ ಬೇರೆ ವಿಷಯಗಳನ್ನೆಲ್ಲಾ ನಾನು ತಿರಸ್ಕರಿಸು ವಂತೆ ಮಾಡಿರುತ್ತೀಯೆ. ಇಂತಹ ನನ್ನ ಸ್ವಾಮಿಯಾದ ನಿನ್ನ ಅನನ್ತಕಲ್ಯಾಣ ಗುಣಸಾಗರದಲ್ಲಿ ಮಗ್ನನಾಗಿ ಆಡುತ್ತಲೂ ಹಾಡುತ್ತಲೂ ಆನನ್ದಪ್ರಮತ್ತನಾಗಿರುವ ನಾನು ಸಕಲವಿಧದುಃಖರಹಿತನಾಗಿ ಹೀಗೆ ಉಜ್ಜೀವಿಸಿ ನಿಂತಿರುವಲ್ಲಿ ನಿನ್ನನ್ನು ಹೇಗೆ ಬಿಡುವೆನು ? (ಎಂದಿಗೂ ಬಿಡಲಾರೆನೆಂದು ಭಾವವು)

(೨೧) ಉಯ್‌ನ್ದು ಪೋನ್ದೆನ್ನುಲಪ್ಪಿಲಾದ, ವೆನ್ತೀವಿನೈಕಳೈ
ನಾಶಮ್ ಶೆಯ್ದು, ಉನ
ದನ್ದಮಿಲಡಿಮೈಯಡೈನ್ದೇನ್ ವಿಡುವೇನೋ,
ಐನ್ದುಪೈನ್ದಲೈಯಾಡರವಣೈಮೇವಿ ಪ್ಪಾಱ್ಕಡಲ್
ಯೋಗನಿತ್ತಿರೈ,
ಶಿನ್ದೈಶೆಯ್ದವೆನ್ದಾಯುನ್ನೈ ಚ್ಚಿನ್ದೈಶೆಯ್ದು ಶೆಯ್ದೇ.

ಪ್ರ॥ ಪಾಲ್‌ಕಡಲ್–ಕ್ಷೀರಸಮುದ್ರದಲ್ಲಿ, ಐನ್ದುಪೈನ್ದಲೈ–ಐದು ಫಣೆಗಳುಳ್ಳ ಶಿರಸ್ಸುಗಳೊಡನೆ ಕೂಡಿದ, ಆಡು–ಆಡುತ್ತಿರುವ, ಅರವು–ಆದಿಶೇಷನೆಂಬ, ಅಣೈ–ಹಾಸಿಗೆಯನ್ನು, ಮೇವಿ–ಹೊಂದಿ, ಯೋಗನಿತ್ತಿರೈ–ಯೋಗನಿದ್ರೆಯಲ್ಲಿ, ಶಿನ್ದೈ ಶೆಯ್ದ–ಲೋಕರಕ್ಷಣ ಚಿನ್ತೆಮಾಡಿದ, ಎನ್ದಾಯ್–ನನ್ನ ಸ್ವಾಮಿಯೇ, ಉನ್ನೈ–

ನಿನ್ನನ್ನು, ಶಿನ್ದೈತ್ತೆಯ್ದು ಶೆಯ್ದು-ಅನವರತ ಧ್ಯಾನಮಾಡಿ, ಉಯ್ನ್ದು-ಉಜ್ಜೀವಿಸಿ, ಪೋನ್ದು-ಸಂಸಾರಿಗಳನ್ನು ಬಿಟ್ಟು ಬಂದು, ಎನ್-ನನ್ನ, ಉಲಪ್ಪು ಇಲಾದ-ಅನ್ತವಿಲ್ಲದ, ವೆಮ್-ಕ್ರೂರವಾದ, ತೀವಿನೈಕಳ್-ಅಗ್ನಿಜ್ವಾಲೆಗಳಂತಿರುವ ಪಾಪಗಳನ್ನು, ನಾಶಮ್‌ಶೆಯ್ದು-ನಾಶಪಡಿಸಿ, ಉನದು-ನಿನ್ನ, ಅನ್ದಮಿಲ್-ಕೊನೆಯುಲ್ಲದ (ಅಪಾರವಾದ), ಅಡಿಮೈ-ಕೈಂಕರ್ಯರೂಪವಾದ ಭೋಗವನ್ನು, ಅಡೈನ್ದೇನ್-ಪಡೆದ ನಾನು ವಿಡುವೇನೋ-(ಇನ್ನುಮೇಲೆ) ಬಿಡುವೆನೋ ?

( ಸ-ಗಾ-ರ || ) —

ಕ್ಷೀರಾಬ್ಧೌ ಶಯಿತೋಽಹಿ ಶೇಷಶಯನೇ ತಾಂ ಯೋಗನಿದ್ರಾಂ ಭಜನ್
ಮನ್ನಾಥ! ತ್ವದುದಾರರೂಪಗುಣಭೂತ್ಯಾದಿಸ್ಮೃತೇರ್ಧನ್ಯತಾಮ್ |
ಲಬ್ಧ್ವಾಽಹಂ ಸಕಲಾಘಸನ್ತತಿಹತಿಂ ಕೃತ್ವಾಽಧುನಾ ಶ್ರೀಹರೇ !
ತ್ವದ್ದಾಸ್ಯಂ ಪರಮಂ ಶುಭಂ ನಿರವಧಿ ಪ್ರಾಪ್ತಸ್ತ್ಯಜಾಮ್ಯೇವ ಕಿಮ್? ||

ತಾ|| ಕ್ಷೀರಸಮುದ್ರದಲ್ಲಿ ಐದು ಹೆಡೆಗಳೊಡನೆ ಆಡುತ್ತಿರುವ ಆದಿಶೇಷನೆಂಬ ಹಾಸಿಗೆಯಲ್ಲಿ ಯೋಗನಿದ್ರೆಮಾಡುತ್ತ ಜಗದ್ರಕ್ಷಣಚಿನ್ತೆಯಲ್ಲಿರುವ ನನ್ನ ಸ್ವಾಮಿಯೇ! ನಿನ್ನನ್ನೇ ಅನವರತ ಧ್ಯಾನಮಾಡಿ ಉಜ್ಜೀವಿಸಿ ನಾನು ಸಕಲಪಾಪಧ್ವಂಸಕನಾಗಿ ನಿನ್ನ ನಿತ್ಯಕೈಂಕರ್ಯ ಸಾಮ್ರಾಜ್ಯಭೋಗವಂ ಪಡೆದಿರುವಲ್ಲಿ ಇನ್ನುಮೇಲೆ ನಿನ್ನನ್ನು ಬಿಡುವೆನೋ ?

(೭) ಉನ್ನೈ ಚ್ಚಿನ್ದೈಶೆಯ್ದು ಶೆಯ್ದುನ್ನೆಡು
ಮಾಮೊழಿಯಿಶೈಪಾಡಿಯಾಡಿ, ಎನ್
ಮುನ್ನೈತ್ತೀವಿನೈಕಳ್, ಮುழುವೇರರಿನ್ದನನ್ ಯಾನ್,
ಉನ್ನೈಚ್ಚಿನ್ದೈಯಿನಾಲಿಕழ்ನ್ದ ಇರಣಿಯನಕಲ್
ಮಾರ್ವಙ್ಗೀಣ್ಡ, ಎನ್
ಮುನ್ನೈಕ್ಕೋಳರಿಯೇ ಮುಡಿಯಾದದೆನ್ನೆನಕ್ಕೇ.

ಪ್ರ|| ಉನ್ನೈ-ನಿನ್ನನ್ನು, ಶಿನ್ದೈಯಿನಾಲ್-ಮನಸ್ಸಿನಿಂದ, ಇಕழ್ನ್ದ-ತಿರಸ್ಕರಿಸಿದ, ಇರಣಿಯನ್-ಹಿರಣ್ಯಕಶಿಪುವಿನ, ಅಕಲ್‌ಮಾರ್ವಮ್-ವಿಶಾಲವಾದ ವಕ್ಷಸ್ಥಲವನ್ನು, ಕೀಣ್ಡ-ಸೀಳಿದ, ಎನ್-ನನ್ನ, ಮುನ್ನೈ-ಅನಾದಿಯಾದ, ಕೋಳರಿಯೇ-ನರಸಿಂಹನಾದವನೇ, ಉನ್ನೈ-(ಇಂತಹ) ನಿನ್ನನ್ನು, ಶಿನ್ದೈಶೆಯ್ದು ಶೆಯ್ದು-ಸನ್ತತ ಧ್ಯಾನಮಾಡಿ, ನೆಡು - ಉತ್ಕೃಷ್ಟವಾದ, ಉನ್-ನಿನ್ನ ಗುಣಾನುಭವರೂಪವಾದ,

ಮೊೞಿ-ಶ್ರೀಸೂಕ್ತಿಯನ್ನು (ಈ ತಿರುವಾಯ್ಮೊೞಿಯನ್ನು), ಮಾ ಇಶೈ-ಶ್ಲಾಘ್ಯವಾದ ಗಾನಸ್ವರಗಳೊಡನೆ, ಪಾಡಿ-ಹಾಡಿ, ಆಡಿ-ಆಡಿ, ಎ-ನನ್ನ, ಮುನ್ನೈತ್ತೀವಿನೈಕಳ್ - ಅನಾದಿಕಾಲದಿಂದಬಂದ ಮಹಾಪಾಪಗಳನ್ನೆಲ್ಲಾ, ಯಾ - ನಾನು, ಮುೞುವೇರ್ ಅರಿನ್ದನನ್-ಸಂಪೂರ್ಣವಾಗಿ ಮೂಲಚ್ಛೇದಮಾಡಿ ನಾಶಪಡಿಸಿದೆನು. ಎನಕ್ಕು-ನನಗೆ, ಮುಡಿಯಾದದು ಅಸಾಧ್ಯವಾದುದು, ಎ-ಯಾವುದು ?

( ಸ-ಗಾ-ರ || )—

**ವಕ್ಷಸ್ತಸ್ಯ ಹಿರಣ್ಯಕಸ್ಯ ಮನಸಾಽಪಿ ತ್ವಾಂ ತು ಧಿಕ್ಕುರ್ವತ-**
**ಸ್ಸಮ್ಭಿದ್ಯಾಸಿ ಪುರಾ ನೃಸಿಂಹ! ಜಗತಾಂ ತ್ರಾತಾ ಸ್ಮರಂಸ್ತ್ವಾಮಹಮ್|**
**ದಿವ್ಯಾಂ ಪದ್ಯತತಿಂ ವಿರಚ್ಯ ವಚಸಾ ಗಾಯಂಶ್ಚ ನೃತ್ಯನ್ನಹೋ !**
**ನಿರ್ಮೂಲ್ಯಾಸ್ಯಘಸನ್ತತಿಂ|ಮಮ ಸುಖೀ! ಕಿಂ ವಾಽಸ್ತ್ಯಸಾಧ್ಯಂ ಮಮ?||**

ತಾ|| ನಿನ್ನನ್ನು ಮನಸ್ಸಿನಿಂದ ಅನಾದರಿಸಿದ ಹಿರಣ್ಯಕಶಿಪುವಿನ ವಕ್ಷಃಸ್ಥಲವನ್ನು ಸೀಳಿದ ಅನಾದಿಯಾದ ನರಸಿಂಹಮೂರ್ತಿಯೇ ! ನಾನು ನಿನ್ನನ್ನು ಸನ್ತತ ಧ್ಯಾನಮಾಡಿ ನಿನ್ನ ಮಹಿಮೆಯ ಸ್ತುತಿರೂಪವಾದ ಈ ತಿರುವಾಯ್ಮೊೞಿ ಶ್ರೀ ಸೂಕ್ತಿಗಳನ್ನು ಗಾನಮಾಡಿ ಲೀಲಾಪರನಾಗಿ ಆಡುತ್ತ ನಿವೃತ್ತಸಕಲಪಾಪಮೂಲನಾಗಿ ಆನನ್ದಿಸುತ್ತಿದೇನಾಗಿ ನನಗೆ ಅಸಾಧ್ಯವಾದುದು(ಅಲಭ್ಯವಾದುದು) ಯಾವುದಾದರೂ ಉಂಟೋ (ನಿನ್ನ ಅನುಗ್ರಹದಿಂದ ನನಗೆ ಸರ್ವಾಭೀಷ್ಟಸಿದ್ಧಿಯುಂಟಾಗಿದೆಯೆಂದು ತಾತ್ಪರ್ಯ.)

(೨) ಮುಡಿಯಾದದೆನ್ನೆನಕ್ಕೇಲಿನಿ ಮುೞುವೇೞುಲಕುಮುಣ್ಡಾನ್,
ಉಕನ್ದುವನ್ದು
ಅಡಿಯೇನುಳ್ ಪುಕುನ್ದಾನಕಲ್ಲಾನುಮೆಲ್ಲನಿನಿ,
ಕಡಿಯಾರ್ ನೋಯ್ಕಳೆಲ್ಲಾಮ್ ತುರನ್ದೆಮರ್‌ಕೀೞ್
ಮೇಲೆೞುಪಿಱಪ್ಪುಮ್,
ವಿಡಿಯಾ ವೆನ್ನರಕತ್ತೆನ್ರುಮ್ ಶೇರ್ದಲ್ ಮಾಱಿನರೇ.

ಪ್ರ|| ಮುೞುವೇೞುಲಕುಮ್-ಪೂರ್ಣವಾದ ಏಳುಲೋಕಗಳನ್ನೂ, ಉಣ್ಡಾನ್-ಭಕ್ಷಿಸಿದವನು, ಉಕನ್ದು - ಆಶೆಪಟ್ಟು, ಅಡಿಯೇನ್ ಉಳ್-ನನ್ನ ಹೃದಯದಲ್ಲಿ, ವನ್ದುಪುಕುನ್ದಾನ್-ಬಂದು ಪ್ರವೇಶಿಸಿದನು. ಇನಿ-ಇನ್ನುಮೇಲೆ, ಅಕಲ್ವಾನುಮ್ ಅಲ್ಲನ್-ಬಿಟ್ಟುಹೋಗುವವನೂ ಅಲ್ಲ; ಕೀೞ್‌ಮೇಲ್-ಕೆಳಗೂ ಮೇಲೂ, ಎೞುಪಿ

ಅಪ್ಪುಮ್-ಏಳುಜನ್ಮಗಳಲ್ಲಿಯೂ, ಎಮರ್ – ನಮ್ಮವರು (ನಮ್ಮ ವಂಶದವರು), ಕಡಿಯಾರ್-ವೃಕ್ಷಗಳಂತೆ ಬೆಳೆದ (ಪಾಪಭರಿತವಾದ), ನೋಯ್‌ಕಳ್ ಎಲ್ಲಾಮ್-ಸರ್ವವ್ಯಾಧಿಗಳನ್ನೂ, ತುರನ್ದು-ಓಡಿಸಿ, ಏಡಿಯಾ – ಅನ್ತ್ಯವಿಲ್ಲದ, ವೆಮ್ ನರಕತ್ತು-ಅತಿಸನ್ತಾಪಕರವಾದ (ಸಂಸಾರ) ನರಕದಲ್ಲಿ, ಎನ್ಱುಮ್ – ಯಾವಾಗಲೂ, ಶೇರ್‌ದಲ್-ಸೇರೋಣವನ್ನು, ಮಾಱ್ಱಿನರ್-ನಿವಾರಣಮಾಡಿಕೊಂಡರು (ದಾಟಿದರು). ಇನಿ-ಇನ್ನುಮೇಲೆ, ಎನಕ್ಕೇಲ್-ನನಗೂ, ಮುಡಿಯಾದದು-ಸಾಧ್ಯವಲ್ಲದೆ ಇರುವುದು, ಎವ್-ಯಾವುದಾದರೂ ಉಂಟೋ ?

( ಸ-ಗಾ-ರ ॥ )—

ಸರ್ವೇಷಾಂ ಜಗತಾಂ ಚ ಭಕ್ಷಣಕರ ಸ್ವಾಮ್ಯರ್ ಪ್ರವಿಶ್ಯೋ ಮಯಿ
ಶ್ರೀಶೋ ನೈವ ಹಿ ಮಾಂ ತ್ಯಜೇತ್ಪುನರಸೌ ! ಮದ್ವಂಶಜಾತಾಖಿಲಾಃ|
ಶೇಽಪ್ಯೂ ಸಪ್ತ ಚ ಪೂರುಷಾಃ ಕುಲಭವಾಃ ಪ್ರಧ್ವಸ್ತಪಾಪಾಸ್ತ್ವಯಂ
ಹಿತ್ವಾ ನಾರಕದುರ್ಗತಿಂ ಪ್ರಮುದಿತಾಃ ! ಕಿಂ ವಾಽಸ್ತ್ಯಸಾಧ್ಯಂ ಮಮ?॥

ತಾ॥ ಸಪ್ತಲೋಕಗಳನ್ನೂ ಭಕ್ಷಿಸಿ ನನ್ನ ಹೃದಯದಲ್ಲಿ ಬಂದು ಪ್ರವೇಶಿಸಿದವನು ಇನ್ನುಮೇಲೆ ಬಿಟ್ಟುಹೋಗಲಾರನು. ನನ್ನ ವಂಶದವರೆಲ್ಲಾ ಕೆಳಗೂ ಮೇಲೂ ಏಳೇಳು ಜನ್ಮಗಳುಳ್ಳವರೂ ಸಮಸ್ತ ದುಃಖರಹಿತರಾಗಿ ಸಂಸಾರಸಾಗರವನ್ನು ದಾಟಿದರು. ಹೀಗಿರುವಲ್ಲಿ ನನಗೂ ಅಸಾಧ್ಯವಾದುದು ಯಾವುದಾದರೂ ಉಂಟೋ ?

(೮) ಮಾಱಿಮಾಱಿ ಪ್ಪಲಪಿಱಪ್ಪುಮ್ಪಿಱನ್ದಡಿಯೈ
ಯಡೈನ್ದುಳ್ಳಮ್ ತೇಱಿ,
ಈಱಿಲಿನ್ಬತ್ತಿರುವೆಳ್ಳಮ್, ಯಾನ್ಮೂೞ್ಕಿನನ್,
ಪಾಱಿಪ್ಪಾಱಿ ಯಸುರರ್‌ತಮ್ ಪಲ್‌ಕುೞಾಙ್ಗಳ್ ನೀಱೆೞ,
ಪಾಯ್‌ಪಱವೈಯೊನ್ಱೂ
ಏಱಿ ವೀಱ್ಱಿರುನ್ದಾಯುನ್ನೈ ಯೆನ್ನುಳ್
ನೀಕ್ಕೇಲೆನ್ದಾಯೇ.

ಪ್ರ॥ ಪಲಪಿಱಪ್ಪುಮ್ – ಅನೇಕ ಜನ್ಮಗಳಲ್ಲೂ, ಮಾಱಿಮಾಱಿ ಪಿಱನ್ದು– ಬೇರೆಬೇರೆರೂಪಗಳಿಂದ ಹುಟ್ಟಿ, ಅಡಿಯೈ ಅಡೈನ್ದು–ನಿನ್ನ ಪಾದಗಳನ್ನು ಹೊಂದಿ,

ಉಳ್ಳಮ್ ತೇಱಿ – ಮನಃಪಾರಿಶುದ್ಧ್ಯವಂ ಪಡೆದು, ಈಱು ಇಲ್ – ಅನ್ತವಿಲ್ಲದ-ಇನ್ಬಮ್–ಆನನ್ದವೆಂಬ, ಇರುವೆಳ್ಳಮ್–ಮಹಾಪ್ರವಾಹದೊಳಗೆ, ಯಾನ್–ನಾನು, ಮೂೞ್ಕಿನೇನ್–ಮುಳುಗಿದೆನು; ಅಸುರರ್ ತಮ್–ರಾಕ್ಷಸರ, ಪಲ್–ಅನೇಕವಿಧವಾದ, ಕುೞಾಙ್ಗಳ್–ಸಮೂಹಗಳು, ಪಾಱಿಪ್ಪಱಿ–ಓಡಿ ಓಡಿ, ನೀಱು ಎೞ–ಧೂಳಿಯಾಗಿ (ಭಸ್ಮವಾಗಿ) ಏಳುವಂತೆ, ಪಾಯ್–ಹಾಯುತ್ತಿರುವ, ಒಣ್ಪುಳ್ಳೈ–ಅದ್ವಿತೀಯನಾದ ಗರುಡನಮೇಲೆ, ಏಱಿ–ಹತ್ತಿ, ವೀಱ್ಱಿರುನ್ದಾಯ್–ಕುಳಿತಿರುವ, ಎನ್ದಾಯ್, ನನ್ನ ತಂದೆಯಾದ, ಉನ್ನೈ – ನಿನ್ನನ್ನು, ಎನ್ನುಳ್ – ನನ್ನ ಅನ್ತರಂಗದಿಂದ, ನೀಕ್ಕೇಲ್–ಹೊರಗೆಹೋಗುವಂತೆ ಮಾಡಬೇಡ.

( ಸ–ಗಾ–ರ ॥ )—

**ಜನ್ಮಾನ್ಯತ್ರ ಪುನಃ ಪುನಶ್ಚ ಸುಬಹೂನ್ಯಾಶ್ರಿತ್ಯ ಚಾದ್ಯಾಸ್ಮ್ಯಹಂ**
**ತ್ವತ್ಪಾದಾಮ್ಬುಜಸಂಶ್ರಯೋ ಹೃದಿ ಮಹಾನನ್ದಾವೃತಾಬ್ಧೌ ಸ್ವಯಮ್ ।**
**ಮಗ್ನೋ ಽಸ್ಮೀಹ! ಭವಾನ್ ಕಿಲಾಸುರಗಣಪ್ರಧ್ವಂಸಕಂ ವಾಹನಂ**
**ತಾರ್ಕ್ಷ್ಯಂ ಭಾತ್ಯಧಿರೂಢಏವ ! ಮಯಿ ನಾಥಾತ್ಕ್ಯೈವ ನಿತ್ಯಂ ಭವ ॥**

ತಾ॥ ನಾನು ಅನೇಕ ಜನ್ಮಗಳಲ್ಲಿ ನಾನಾರೂಪಗಳನ್ನು ಪಡೆದು ಕ್ರಮೇಣ ನಿನ್ನ ಪಾದಾರವಿಂದವಂ ಭಜಿಸಿ ನಿರ್ಮಲಮನಸ್ಕನಾಗಿ ನಿರತಿಶಯಾನನ್ದಸಿನ್ಧುಮಗ್ನನಾದೆನು. ಸಕಲ ರಾಕ್ಷಸಕುಲಧ್ವಂಸಕನಾದ ಗರುಡನಮೇಲೆ ಕುಳಿತು ಸಂಚರಿಸುವ ನನ್ನ ತಂದೆಯಾದ ನೀನು, ನನ್ನ ಹೃದಯವನ್ನು ಬಿಟ್ಟು ಹೊರಗೆ ಹೋಗಕೂಡದು. (ಎಂದು ತನ್ನ ಅಭಿಪ್ರಾಯವನ್ನು ತಿಳಿಯಪಡಿಸುವ ಪ್ರಕಾರವು.)

(೯) ಎನ್ದಾಯ್ ತಣ್ ತಿರುವೇಙ್ಗಡತ್ತುಳ್ ನಿನ್ಱಾಯ್,
ಇಲಙ್ಗೈಶೆಱ್ಱಾಯ್, ಮರಾಮರಮ್,
ಪೈನ್ದಾಳೇೞುರುವ, ಒರುವಾಳಿಕೋತ್ತವಿಲ್ಲಾ,
ಕೊನ್ದಾರ್ ತಣ್ಣನ್ದುೞಾಯಿನಾಯ್ ಅಮುದೇ
ಉನ್ನೈ ಯೆನ್ನುಳ್ಳೇ ಕುೞೈತ್ತವೆಮ್,
ಮೈನ್ದಾ, ವಾನೇಱೇ ಯಿನಿಯೆಙ್ಙುಪ್ಪೋಕಿನ್ಱದೇ.

ಪ್ರ॥ ಎನ್ದಾಯ್–ನನ್ನ ಸ್ವಾಮಿಯೇ, ತಣ್–ಶೀತಳವಾದ, ತಿರುವೇಙ್ಗಡತ್ತುಳ್–ವೆಂಕಟಾದ್ರಿಯಲ್ಲಿ (ತಿರುಪತಿಬೆಟ್ಟದಮೇಲೆ), ನಿನ್ಱಾಯ್–ನಿಂತಿರುವವನೇ,

ಇಲಙ್ಗೈಶ್ಶೆತ್ತಪ್ಪಿರಾನ್ – ಲಂಕಾಧ್ವಂಸಕನೇ, ಮಾಮರಙ್ಗಳ್ – ಸಾಲವೃಕ್ಷಗಳ್, ಶ್ಯೆನ್ದಾಳ್ ಏಳು-ದೊಡ್ಡ ಬುಡಗಳು ಏಳೂ, ಉಕಿವ-ನಾಶವಾಗುವಂತೆ, ಒರುವಾಳಿ ಕೋತ್ತ–ಒಂದು ಬಾಣವನ್ನು ಧರಿಸಿರುವ, ವಿಲ್ಲಾ–ಧನುಸ್ಸುಳ್ಳವನೇ, ಕೊನ್ನು ಅರ್–ಗೊಂಚಲುಗಳು ತುಂಬಿರುವ, ತಣ್–ಶೀತಳವಾದ, ಅಮ್–ರಮ್ಯವಾದ, ತುಳಾಯಿ ನಾಯ್–ತುಳಸೀಮಾಲೆಯುಳ್ಳವನೇ, ಎನ್ ಅಮುದೇ–ನನಗೆ ಅಮೃತಸ್ವರೂಪನೇ, ಉನ್ನೈ–ನಿನ್ನನ್ನು, ಎನ್ನುಳ್ಳೇ–ನನ್ನೊಳಗೆ, ಕುಳೈತ್ತ–ಸೇರಿಸಿದ, ಮೈನ್ದಾ–ನಿತ್ಯಯೌವನಶಾಲಿಯೇ, ವಾನ್ ಏತ್ತಾ–ನಿತ್ಯಸೂರಿಗಳಿಗೆ ಸ್ವಾಮಿಯೇ, ಇನಿ-ಇನ್ನು ಮೇಲೆ, ಎಙ್ಗು ಪೋಕಿನ್ರದು–(ನೀನು) ಎಲ್ಲಿಗೆಹೋಗುವೆ?

( ಸ-ಗಾ-ರ || )—

**ಸ್ಥಿತ್ವಾ ವೇಙ್ಕಟಭೂಧರೇ ವಿಜಯಸೇ ಮನ್ನಾಥ ! ಲಙ್ಕಾನ್ತಕ !**
**ತ್ವಂ ಸಾಲಾನಪಿ ಸಪ್ತ ಚೈಕಶರತಶ್ಛಿತ್ವಾಽಸಿ ಧನ್ವೀ ಮಹಾನ್ !**
**ಭಾಸಿ ತ್ವಂ ಕಿಲ ದಿವ್ಯರಮ್ಯತುಲಸೀಮಾಲೋಽದ್ಯ ದಿವ್ಯಾಮೃತ !**
**ತ್ವಾಂ ಸಮ್ಮಿಶ್ರ್ಯ ಮಯೀಹ ನಾಯಕ! ಕಥಂ ದೇವೇಶ! ಯಾಸ್ಯನ್ಯತಃ ? ||**

ತಾ|| ಶ್ರೀ ವೇಂಕಟಾದ್ರಿನಾಥನಾಗಿಯೂ, ಲಂಕಾಧ್ವಂಸಕನಾಗಿಯೂ, ಸಪ್ತ ಸಾಲಭಂಜಕನಾಗಿಯೂ, ದಿವ್ಯತುಳಸೀಮಾಲಾಧರನಾಗಿಯೂ, ಅಮೃತಸ್ವರೂಪನಾಗಿಯೂ ಇರುವ ನನ್ನ ಸ್ವಾಮಿಯೇ! ನೀನು ನಿತ್ಯಯೌವನಶಾಲಿಯಾಗಿ ನನ್ನೊಡನೆ ಸಂಶ್ಲೇಷಿಸಿ ನಿತ್ಯಸೂರೀಶ್ವರನಾಗಿ ಪ್ರಕಾಶಿಸುತ್ತೀಯೆ. ಇಂತಹ ನೀನು ನನ್ನನ್ನು ಬಿಟ್ಟು ಇನ್ನುಮೇಲೆ ಎಲ್ಲಿಗೆ ಹೋಗುವೆ? (ಎಲ್ಲಿಗೂ ಹೋಗಲಾರೆಯೆಂದು ಭಾವವು.)

(೧೦) ಪೋಕಿನ್ರ ಕಾಲಙ್ಗಳ್ ಪೋಯಕಾಲಙ್ಗಳ್
ಪೋಕುಕಾಲಙ್ಗಳ್, ತಾಯ್ ತನ್ದೈಯುಯಿ
ರಾಕಿನ್ರಾಯ್ ಉನ್ನೈ ನಾನಡೈನ್ದೇನ್ ವಿಡುವೇನೋ,
ಪಾಕಿನ್ರ ತೊಲ್ ಪುಕಳ್ ಮೂವುಲಕುಕ್ಕುಮ್ ನಾದನೇ
ಪರಮಾ, ತಣ್ ವೇಙ್ಗಡ
ಮೇಕಿನ್ರಾಯ್ ತಣ್ ತುಳಾಯ್ ವಿರೈನಾಱು ಕಣ್ಣಿಯನೇ.

ಪ್ರ|| ಪೋಕಿನ್ರ ಕಾಲಙ್ಗಳ್–ವರ್ತಮಾನಕಾಲಗಳೂ, ಪೋಯಕಾಲಙ್ಗಳ್–ಭೂತಕಾಲಗಳೂ, ಪೋಕುಕಾಲಙ್ಗಳ್ – ಭವಿಷ್ಯತ್ಕಾಲಗಳೂ (ಇವುಗಳೆಲ್ಲಾ),

ತಾಯ್ ತನ್ದೈ ಉಯಿರ್ ಆಕಿನ್ರಾಯ್ – (ನೀನೇ) ತಾಯಿ-ತಂದೆ-ಆತ್ಮ-ಎಲ್ಲಾ ಆಗಿರುತ್ತೀಯೆ; ಪಾಕಿನ್ರ – ವಿಸ್ತರಿಸಿಕೊಂಡಿರುವ, ತೊಲ್ – ಅನಾದಿಯಾದ, ಪುಕರ್ಳ-ಕೀರ್ತಿಯುಳ್ಳ, ಮೂವುಲಕುಕ್ಕುಮ್–ಮೂರುಲೋಕಗಳಿಗೂ, ನಾದನೇ-ಸ್ವಾಮಿಯೇ, ಪರಮಾ-ಶ್ರೇಷ್ಠನೇ, ತಣ್-ಶೀತಳವಾದ, ವೇಙ್ಗಡಮ್-ವೇಂಕಟಾದ್ರಿಯನ್ನು, ಮೇಕಿನ್ರಾಯ್–ಹೊಂದಿರುವವನೇ, ತಣ್ – ಶೀತಳವಾದ, ವಿರೈನಾಱು–ಪರಿಮಳಭರಿತವಾದ, ತುೞಾಯ್ ಕಣ್ಣಿಯನೇ – ತುಳಸೀಮಾಲೆಯುಳ್ಳವನೇ, ಉನ್ನೈ-ನಿನ್ನನ್ನು, ನಾನ್–ನಾನು, ಅಡೈನ್ದೇನ್–ಆಶ್ರಯಿಸಿದೆನು; ವಿಡುವೇನೋ-(ಇನ್ನುಮೇಲೆ) ಬಿಡುವೆನೋ ? (ಬಿಡಲಾರೆನು.)

( ಸ-ಗಾ-ರ || )—

**ಕಾಲೇಷ್ವದ್ಯತನೇಷ್ವತೀತಸಮಯೇಷ್ವಾಗಾಮಿಕಾಲೇಷ್ವಪಿ**
**ತ್ವಂ ಮಾತಾ ಚ ಪಿತಾ ಮಮಾಸಿ ಹಿ ಮಮಾಪ್ಯಾತ್ಮಾ ಜಗನ್ನಾಯಕಃ |**
**ಸೌಶೀಲ್ಯಾಮ್ಬುನಿಧಿಂ ಚ ವೇಙ್ಕಟಪತಿಂ ತ್ವಾಂ ದಿವ್ಯಮಾಲೋಜ್ಜ್ವಲಂ**
**ಸಂಶ್ರಿತ್ಯಾದ್ಯ ಕಥಂ ತ್ಯಜಾಮಿ ತುಲಸೀಸೌಗನ್ಧ್ಯಸಾರಾನ್ವಿತಮ್ ? ||**

ತಾ|| ವರ್ತಮಾನ – ಭೂತ-ಭವಿಷ್ಯತ್ಕಾಲಗಳಲ್ಲೆಲ್ಲಾ ನೀನೇ ಮಾತಾಪಿತೃರೂಪಿಯಾಗಿಯೂ ಅನ್ತರಾತ್ಮನಾಗಿಯೂ ಇರುತ್ತೀಯೆ. ತ್ರೈಲೋಕ್ಯಾಧಿಪತಿಯಾಗಿಯೂ ಪರಾತ್ಪರನಾಗಿಯೂ ಇರುವ ನೀನು ವೇಂಕಟಾದ್ರಿಯೊಳು ನಿಂತು ಪ್ರಕಾಶಿಸುತ್ತೀಯೆ. ಇಂತಹ ದಿವ್ಯಸುಗನ್ಧ ತುಳಸೀಮಾಲಾಧರನಾದ ನಿನ್ನನ್ನು ಆಶ್ರಯಿಸಿರುವ ನಾನು ನಿನ್ನನ್ನು ಬಿಡುವೆನೋ ? (ಎಂದಿಗೂ ಬಿಡಲಾರೆನೆಂದು ತಾತ್ಪರ್ಯ.) .

(೧೧) ಕಣ್ಣಿತ್ತಣ್ಣನ್ದುೞಾಯ್ಮುಡಿ,ಕ್ಕಮಲತ್ತಡವಮ್ ಪೆರುಮ್
ಕಣ್ಣನೈ, ಪ್ಪುಕೞ್ನಣ್ಣಿ ತ್ತೆನ್ಕುರುಕೂರ್ ಚ್ಚಡಕೋಪನ್
ವಣ್ಣಾಱ್ತೊನ್ನ
ಎಣ್ಣಿಲ್ಪ್ಪಿನ್ನಿಲನನ್ದಿ,ಯಾಯಿರತ್ತುಳಿವೈಯುಮೋರ್
ಪತ್ತಿವೈಯೊಡುಮ್,
ಪಣ್ಣಿಲ್ ಪಾಡವಲ್ಲಾರವರ್ ಕೇಶವನ್ ತಮರೇ.

ಪ್ರ|| ಕಣ್ಣಿ–ಮಾಲಾರೂಪವಾಗಿರುವ, ತಣ್–ಶೀತಳವಾದ, ಅಮ್ ತುೞಾಯ್–ರಮ್ಯವಾದ ತುಳಸಿಯಿಂದ ಅಲಂಕರಿಸಲ್ಪಟ್ಟ, ಮುಡಿ–ಕಿರೀಟವನ್ನು ಧರಿಸಿರುವ, ಕಮಲತ್ತಡಮ್–ಕಮಲದಂತೆ ವಿಶಾಲವಾದ, ಪೆರುಮ್ ಕಣ್ಣನೈ–ದೀರ್ಘನೇತ್ರಗಳುಳ್ಳ ಸ್ವಾಮಿಯನ್ನು, ಪುಕೞ್ನಣ್ಣಿ–ಕಲ್ಯಾಣಗುಣಾನುಭವವಂಮಾಡಿ, ತೆನ್

ಕುರುಕೊರ್‌-ರಮ್ಯವಾದ ಕುರುಕಾಪುರಿಯ, ಶಡಕೋರ್ಪ ಮಾಱ-ಮಾಱ ಎಂಬ ಹೆಸರುಳ್ಳ, ಶ್ರೀ ಶಠಾರಿಯು, ಶೊನ್ನ – ಸ್ತೋತ್ರಮಾಡುವುದಕ್ಕಾಗಿ ರಚಿಸಿದ, ಎಣ್ಣಿಲ್‌-ಭಗದನುಭವಾಭಿಪ್ರಾಯದಲ್ಲಿ, ಶೋರ್ವಿಲ್‌-ದೋಷವಿಲ್ಲದ, ಅನಾದಿ-ಅನಾದಿ ರೂಪವಾದ, ಆಯಿರತ್ತುಳ್‌-ಸಹಸ್ರಪದ್ಯಗಳೊಳು, ಓರ್‌-ಅದ್ವಿತೀಯವಾದ, ಇವ್ವೈಪತ್ತುಮ್‌-ಈ ದಶಕವನ್ನು, ಇಶ್ಶೈಯೊಡುಮ್ – ಗಾನಸ್ವರದೊಡನೆ, ಪಣ್ಣಿಲ್ – ಹಾಡುಗಳಾಗಿ (ಕಂಠದಲ್ಲಿ), ಪಾಡವಲ್ಲಾರವರ್ – ಹಾಡಬಲ್ಲವರು, ಕೇಶವ್ವ ತಮರ್‌-ಕೇಶವನ ಅನ್ತರಂಗಭಕ್ತರೇ ಆಗುವರು.

( ಸ-ಗಾ-ರ ॥ )—

ಮಾಲಾಕಾರಸುರಮ್ಯಶೀತತುಲಸೀಭಾಸ್ವತ್ಕಿರೀಟಂ ಹರಿಂ
ಸ್ತೋತುಂ ಪದ್ಮವಿಶಾಲಲೋಚನಮಸೌ ಸೂರಿಶ್ಶಠಾರಿರ್ಮುನಿಃ।
ಸಾಹಸ್ರಂ ಕುರುಕಾಪುರಪ್ರಭುರಹೋ ! ಮಾರಾಭಿಧಾನೋಽಬ್ರವೀ-
ತ್ತತ್ರೇದಂ ದಶಕಂ ಪ್ರಗಾಯ ರಸಿಕಾಸ್ಸ್ಯುಃ ಕೇಶವಸ್ಯ ಪ್ರಿಯಾಃ॥

ತಾ॥ ದಿವ್ಯತುಳಸೀಮಾಲಾಲಂಕೃತ ಕಿರೀಟಧಾರಿಯಾದ ಪುಂಡರೀಕ ವಿಶಾಲ ನೇತ್ರನಾದ ಸ್ವಾಮಿಯನ್ನು ಕಲ್ಯಾಣಗುಣಾನುಭವದೊಡನೆ ಸ್ತೋತ್ರಮಾಡುವುದಕ್ಕಾಗಿ ಶ್ರೀ ಶಠಾರಿಮುನಿಯು ರಚಿಸಿದ ನಿರ್ದೋಷವಾದ ಅನಾದಿರೂಪ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಗಾನಮಾಡುವವರು ಶ್ರೀ ಕೇಶವನ ಅನ್ತರಂಗ ಭಕ್ತರೇ ಆಗುವರೆಂಬುದು ಸತ್ಯವೆಂದು ತಾತ್ಪರ್ಯ.

( ದ್ರ-ಉ-ಸಂ ॥ )—

ನೀಚಂ ಚ ಮಾಮಧಿಗತೋಽಯಮಿತಿ ಸ್ವಸೂಕ್ತ್ಯಾ
ಜಾತಾಂ ಹರೇಸ್ಸ್ವವಿರಹಾಗಮನೇಽತಿಶಙ್ಕಾಮ್ ।
ಷಷ್ಠೇ ನಿರಸ್ಯ ದೃಢಸಙ್ಗಿರಾ ಶಠಾರಿ-
ರಾತ್ಮಾನ್ವಯಿಷ್ವಪಿ ತದಾದರತೋಽಭ್ಯನನ್ದತ್ ॥

( ದ್ರ-ಉ-ತಾ-ರ ॥ )—

ಸ್ವಾತ್ಮಸ್ವಾದವ್ಯಾಪಕತ್ವಾಚ್ಚಿರತನಿಯುತದೃಶೇರ್ನೈಕಭೋಗಪ್ರದಾನಾ-
ತ್ತ್ಯಾಗಾನರ್ಹಪ್ರಕಾಶಾತ್ ಸ್ಥಿರಪರಿಚರಣಸ್ಥಾಪನಾತ್ಪಾಪಭಙ್ಗಾತ್।
ದುಸ್ಸಾಧಾರ್ಥಸ್ಯ ಸಿದ್ಧೇರ್ವಿರಹಭಯಕೃತೇರ್ದುರ್ವಿಭೇದಾತ್ಮಯೋಗಾ-
ನ್ನಿತ್ಯಾನೇಕೋಪಕಾರಾತ್ಸ್ವವಿರಹಚಕಿತಂ ಪ್ರತ್ಯಕ್ಷತಾಮ್ಭೋರುಹಾಕ್ಷಮ್ ॥

(ಈ ಷಷ್ಠದಶಕದ ಸಾರಾಂಶ)—

ಈ ಆರನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ತಮ್ಮ ನೈಚ್ಯವನ್ನು ನೋಡಿ ಚಿನ್ತಾಕ್ರಾನ್ತನಾಗಿದ್ದ ಭಗವನ್ತನನ್ನು ಅನೇಕಪ್ರಕಾರಗಳಿಂದ ಸಮಾಧಾನ ಪಡಿಸಲಾರಂಭಿಸಿ "ಕಾಲತ್ರಯದಲ್ಲೂ ಸರ್ವವಿಧ ಬನ್ಧುವಾದ ನಿನ್ನನ್ನು ನಾನು ಎಂದಿಗೂ ಬಿಡಲಾರೆನು. ನೀನೂ ನನ್ನನ್ನು ಬಿಟ್ಟುಹೋಗಲಾರೆ" ಎಂದು ಪ್ರತಿಜ್ಞೆಮಾಡಲು ಭಗವನ್ತನು ಸನ್ತುಷ್ಟನಾದನೆಂದು ವರ್ಣಿಸಿ ಇರುತ್ತಾರೆ.



## ಶ್ರೀಃ

# ದ್ವಿತೀಯಶತಕದಲ್ಲಿ—ಸಪ್ತಮದಶಕ.

(ಕೇಶವನ್ ತಮರ್—)

(ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ಭಗವನ್ತನಿಗೆ ತಮ್ಮಲ್ಲಿ ಉಂಟಾದ ಪ್ರೀತಿಯು ತಮ್ಮ ಸಂಬನ್ಧಿ ಸಂಬನ್ಧಿ ಪರಂಪರೆಯ ವಿಷಯದಲ್ಲಿಯೂ ಉಂಟಾಯಿತೆಂದೂ, ಕೇಶವಾದಿ ದ್ವಾದಶನಾಮಪ್ರತಿಪಾದ್ಯನಾದ ಭಗವಂತನನ್ನೇ ಹೊಂದಿ ತಮ್ಮ ನಂಬ್ಬರೆಲ್ಲಾ ಉಜ್ಜೀವಿತರಾದರೆಂದೂ ನಿರೂಪಿಸುತ್ತಾರೆ.)

---

(೧) ಕೇಶವನ್ ತಮರ್ ಕೀೞ್ಮೇಲೆಮರೇೞೆೞು ಪಿಱಪ್ಪುಮ್,
ಮಾಶದಿರಿದುಪೆಱ್ಱು ನಮ್ಮುಡೈವಾೞ್ವು ವಾಯ್ಕ್ಕಿನ್ಱವಾ,
ಈಶನೆನ್ ಕರುಮಾಣಿಕ್ಕಮೆನ್ ಶೆಙ್ಗೋಲಕ್ಕಣ್ಣನ್ ವಿಣ್ಣೋರ್
ನಾಯಕನ್, ಎಮ್ಬಿರಾನೆಮ್ಮಾನ್ನಾರಾಯಣನಾಲೇ.

ಪ್ರ॥ ಈಶನ್—ಸರ್ವಸ್ವಾಮಿಯಾದ, ಎನ್ ಕರುಮಾಣಿಕ್ಕಮ್—ನನ್ನ ನೀಲರತ್ನವಾದ, ಎನ್ ಶೆಙ್ಗೋಲಕ್ಕಣ್ಣನ್—ನನ್ನ ರಮಣೀಯರಕ್ತನೇತ್ರನೂ, ವಿಣ್ಣೋರ್ನಾಯಕನ್ — ನಿತ್ಯಸೂರೀಶ್ವರನೂ, ಎಮ್ಬಿರಾನ್ — ನಮಗೆ ಸ್ವಾಮಿಯಾದವನೂ, ಎಮ್ಮಾನ್—ನಮ್ಮ ಶ್ರೇಷ್ಠನೂ ಆದ, ನಾರಾಯಣನಾಲೇ—ಶ್ರೀಮನ್ನಾರಾಯಣನಿಂದ (ಅವನ ಅನುಗ್ರಹದಿಂದ), ಕೀೞ್ಮೇಲ್ ಏೞ್ ಏೞ್ಪಿಱಪ್ಪುಮ್—ಕೆಳಗೂ ಮೇಲೂ ಏಳೇಳು ಜನ್ಮಗಳಲ್ಲೂ, ಕೇಶವನ್ತಮರ್—ಕೇಶವನ ಭಕ್ತರಾದ, ಎಮರ್—ನಮ್ಮ

ವರು, ಇದು–ಈ, ಮಾಶದಿರ್–ಮಹಾಚಾತುರ್ಯವನ್ನು, ಪೆಱ್ಱು–ಹೊಂದಿ (ಇರುವರಿಂದ), ನಮ್ಮುಡೈವಾೞ್ವು–ನಮ್ಮ ಈ ಶ್ರೀವೈಷ್ಣವ ಶ್ರೀಸಮೃದ್ಧಿಯು, ವಾಯ್ಕ್ಕಿನ್ಱವಾ–ಬೆಳೆಯುವ ಪ್ರಕಾರವು ಎಂತಹುದೋ !

( ಸ–ಗಾ–ರ || ) —

ಶ್ರೀಮತ್ಕೇಶವಸಂಶ್ರಯಾಃ ಕಿಲ ಮಮ ಪ್ರಾಪ್ತಾಃ ಕುಲೋತ್ಪಾದಿತಾ–
ಸ್ತೇ ಪೂರ್ವೋತ್ತರಸಪ್ತಸಪ್ತ ! ಮಹತೀಂ ದಿವ್ಯಾಂ ಗತಿಂ ವೈಷ್ಣವೀಮ್ !
ಈಶಸ್ಯಾಸ್ಯ ಮಮ ಪ್ರಭೋರಿಹ ಮಹಾಮಾಣಿಕ್ಯವರ್ಣಸ್ಯ ಚ
ಶ್ರೀಸೂರೀನ್ದ್ರಪತೇಃ ಪ್ರಸಾದಭರತೋ ನಾರಾಯಣಸ್ಯಾಶ್ರಯಾತ್ ||

ತಾ|| ಸರ್ವಸ್ವಾಮಿಯಾಗಿಯೂ, ನೀಲಮಣಿವರ್ಣನಾಗಿಯೂ, ರಮಣೀಯನೇತ್ರನಾಗಿಯೂ, ನಿತ್ಯಸೂರೀಶ್ವರನಾಗಿಯೂ ಇರುವ ನಮ್ಮ ಸ್ವಾಮಿಯಾದ ಶ್ರೀಮನ್ನಾರಾಯಣನ ಅನುಗ್ರಹದಿಂದ ನಮ್ಮ ವಂಶದವರೆಲ್ಲರೂ ಕೆಳಗೇಳು ಮೇಲೇಳು ಜನ್ಮಗಳಲ್ಲೂ ಇಂತಹ ಭಗವತ್ಪ್ರೀತಿಪಾತ್ರರಾಗುವ ಮಹಾಚಾತುರ್ಯವನ್ನು ( ನನ್ನ ಹಾಗೆಯೇ) ಪಡೆದುದರಿಂದ ನಮ್ಮ ಈ ಶ್ರೀವೈಷ್ಣವ ಶ್ರೀಸಮೃದ್ಧಿಯು ಬೆಳೆಯುವ ಪ್ರಕಾರವು ಅತ್ಯಾಶ್ಚರ್ಯಕರವೆಂದು ಭಾವವು.

(೨) ನಾರಣನ್ ಮುೞುವೇೞುಲಕುಕ್ಕುಮ್ ನಾದನ್ ವೇದಮಯನ್,
ಕಾರಣಮ್ ಕಿರಿಶೈ ಕರುಮಮಿವೈ ಮುದಲ್ವನೆನ್ದೈ,
ಶೀರಣಙ್ಗಮರರ್ ಪಿಱರ್ ಪಲರುಮ್, ತೊೞುದೇತ್ತ ನಿನ್ಱ,
ವಾರಣತ್ತೈ ಮರುಪ್ಪೊಶಿತ್ತ ಪಿರಾನೆನ್ ಮಾದವನೇ.

ಪ್ರ|| ನಾರಣನ್–ಶ್ರೀಮನ್ನಾರಾಯಣನು, ಮುೞು ಏೞು ಉಲಕುಕ್ಕುಮ್–ಸಮಸ್ತ ಲೋಕಗಳಿಗೂ, ನಾದನ್ – ಸ್ವಾಮಿಯಾದವನು, ವೇದಮಯನ್ – ವೇದಸ್ವರೂಪಿಯು; ಕಾರಣಮ್–ಕ್ರಿಯಾಹೇತುವಾದಕಾರಣವೂ, ಕಿರಿಶೈ–ಕ್ರಿಯೆಯೂ, ಕರುಮಮ್–ಕ್ರಿಯಾಫಲವಾದ ಕಾರ್ಯವೂ, ಇವೈ – ಇವುಗಳಿಗೆಲ್ಲಾ, ಮುದಲ್ವನ್–ಕಾರಣಭೂತನು. ಶೀರ್–ಗುಣೋತ್ಕರ್ಷವುಳ್ಳ, ಅಣಙ್ಗು–ದಿವ್ಯರಾದ, ಅಮರರ್–ದೇವತೆಗಳೂ, ಪಿಱರ್–ಇತರರೂ (ಋಷಿಗಳೂ ಮನುಷ್ಯಾದಿಗಳೂ), ಪಲರುಮ್–ಎಲ್ಲರೂ, ತೊೞುದು–ನಮಸ್ಕರಿಸಿ, ಏತ್ತ–ಸ್ತೋತ್ರಮಾಡುವನ್ತೆ, ನಿನ್ಱ–ನಿಂತು, ವಾರಣತ್ತೈ–ಕುವಲಯಾಪೀಡವೆಂಬ ಆನೆಯನ್ನು, ಮರುಪ್ಪು ಒಶಿತ್ತ–ಕೊಂಬು ಮುರಿದು ಮರ್ದನಮಾಡಿದ, ಪಿರಾನ್–ಮಹೋಪಕಾರಕನಾದ ಸ್ವಾಮಿಯು; ಎನ್–

ನನ್ನ, ಮಾದರ್ವ-ಶ್ರಿಯಃಪತಿಯಾದ ಭಗವನ್ತನು, ಎನ್ದ್ರೈ-ನನಗೆ ಶೇಷಿಯಾದ ಮಹಾಪ್ರಭುವು.

( ಸ-ಗಾ-ರ ॥ )—

ಶ್ರೀನಾರಾಯಣ ಏವ ಸರ್ವಜಗತಾಂ ನಾಥೋಽಸ್ತಿ ವೇದಾತ್ಮಕೋ
ಮೂಲಂ ಕಾರಣಮಸ್ತಿ ಕರ್ಮ ಚ ಕೃತೀಃ ಪೂರ್ವಶ್ಚ ಸರ್ವಾತ್ಮನಾಮ್ ।
ಸ್ತುತ್ಯಸ್ಸರ್ವಗುಣಾಕರೋಽಮರಗಣೈರನ್ಯೈಶ್ಚ ಸರ್ವೈರಯಂ
ಸ್ವಾಮೀ ಮತ್ತಗಜಸ್ಯ ದನ್ತಭಿದಹೋ ! ಮೇ ನಾಯಕೋ ಮಾಧವಃ॥

ತಾ॥ ಸಪ್ತ ಲೋಕಗಳಿಗೂ ನಾಥನಾಗಿಯೂ, ವೇದಸ್ವರೂಪಿಯಾಗಿಯೂ, ಸರ್ವವಿಧಕ್ರಿಯಾಮೂಲಕಾರಣಕಾರ್ಯಭೂತನಾಗಿಯೂ, ಸಕಲಕಲ್ಯಾಣಗುಣಾಕರನಾಗಿಯೂ ದೇವಾದಿಸರ್ವಲೋಕವಂದ್ಯನಾಗಿಯೂ ಇರುವ ಶ್ರೀಮನ್ನಾರಾಯಣನೇ ! ಮತ್ತಗಜಮರ್ದನನಾಗಿ (ಶ್ರೀಕೃಷ್ಣರೂಪಿಯಾಗಿ) ನನಗೆ ಶೇಷಿಯಾಗಿ ಮಹೋಪಕಾರಕನಾಗಿರುವ ಮಾಧವನು. ( ಇಂತಹ ಸ್ವಾಮಿಯೇ ನಮ್ಮ ಕುಲಗಳಿಗೆಲ್ಲಾ ಉದ್ಧಾರಕನೆಂದು ಭಾವವು. )

(೩) ಮಾದವನೆನ್ರದೇ ಕೊಣ್ಡೆನ್ನೈ ಯಿನಿ ಯಿಪ್ಪಾಲ್‌ಪಟ್ಟದು,
ಯಾದವಙ್ಗಳುವಮ್ ಶೇರ್‌ಕೊಡೇನೆನ್ರಿನ್ನುಳ್ ಪುಕುನ್ದಿರುನ್ದು,
ತೀದವಮ್ ಕೆಡುಕ್ಕುಮಮುದಮ್ ಶೆನ್ತಾಮರೈಕ್ಕಣ್ ಕುನ್ರಮ್,
ಕೋದವಮಿಲೆನ್ ಕನ್ನಲ್‌ಕಟ್ಟಿ ಯೆಮ್ಮಾನೆನ್ ಗೋವಿನ್ದನೇ.

ಪ್ರ॥ ಎನ್ ಗೋವಿನ್ದನ್-ನನಗೋಸ್ಕರ ಕೃಷ್ಣನಾಗಿ ಅವತರಿಸಿದ, ಎಮ್ಮಾನ್-ನನ್ನ ಸ್ವಾಮಿಯಾದ, ಮಾದರ್ವ-ಶ್ರಿಯಃಪತಿಯು, ಎನ್ರದೇ – ಎಂದು ನಾನು ಹೇಳಿದ ಉಕ್ತಿಮಾತ್ರವನ್ನೇ, ಕೊಣ್ಡು-ವ್ಯಾಜವಾಗಿ ಮಾಡಿಕೊಂಡು, ಎನ್ನೈ-ನನ್ನನ್ನು, ಇನಿ-ಇನ್ನುಮೇಲೆ, ಇಪ್ಪಾಲ್ ಪಟ್ಟದು-ಮೇಲೆ ಬರುವ ಕಾಲವೆಲ್ಲಾ, ಅವಙ್ಗಳ್-ಅವಿದ್ಯಾದಿ ದೋಷಗಳು, ಯಾದುಮ್-ಯಾವುವೂ, ಶೇರ್‌ಕೊಡೇನ್-ಸೇರುವಂತೆ ಅವಕಾಶಕೊಡೆನು, ಎನ್ರು-ಎಂದು ಸಂಕಲ್ಪಿಸಿ, ಎನ್ ಉಳ್ ಪುಕುನ್ದು ಇರುನ್ದು—ನನ್ನ ಮನಸ್ಸಿನಲ್ಲಿ ಪ್ರವೇಶಿಸಿದ್ದು, ತೀದು-ತೀಮೆಮಾಡಿದ ದುಷ್ಟಕೃತ್ಯವನ್ನೂ, ಅವಮ್-ಪ್ರಾಮಾದಿಕದೋಷವನ್ನೂ, ಕೆಡುಕ್ಕುಮ್-ನಾಶಪಡಿಸುವ, ಅಮುದಮ್ – ಅಮೃತದಂತೆ ಇರುವವನು, ಶೆನ್‌ತಾಮರೈಕ್ಕಣ್ – ಕೆಂದಾವರೆಯಂತೆ ಇರುವ ಕಣ್ಣುಗಳುಳ್ಳ, ಕುನ್ರಮ್-ಪರ್ವತದಂತೆ ಇರುವ ಉನ್ನತ ಶರೀರ

ವುಳ್ಳವನು, ಕೋದು ಅವನ್ ಇಲ್-ನ್ಯೂನತೆಯೂ ದೋಷವೂ ಇಲ್ಲದ, ಎನ್ ಕನ್ನಲ್ ಕಟ್ಟಿ-ನನಗೆ ಭೋಗ್ಯನಾದ ಸಕ್ಕರೆಯ ಗಟ್ಟಿಯು.

( ಸ-ಗಾ-ರ ॥ )—

**ಸತ್ಯಂ! ಮಾಧವನಾಮಕೀರ್ತನಬಲಾತ್ಸ್ವಾಮೀ ಮಮ ಶ್ರೀಧರೋ**
**ನಾನಾದೋಷತತಿಂ ಪ್ರಹನ್ತುಮಪಿ ಮೇ ಚಿತ್ತೇ ಪ್ರವಿಶ್ಯ ಸ್ವಯಮ್ ।**
**ಸರ್ವಾಘಪ್ರಶಮಪ್ರಭುಃ ಕಿಲ ಸುಧಾಪೂರೋಽಬ್ಜನೇತ್ರೋ ಮಹಾ-**
**ನದ್ರಿಪ್ರಾಯ ಇಹೇಕ್ಷುಖಣ್ಡಶರಧಿಗೋವಿನ್ದ ಏವಾಚ್ಯುತಃ ॥**

ತಾ॥ "ನನಗೋಸ್ಕರ ಕೃಷ್ಣ ರೂಪಿಯಾಗಿ ಅವತರಿಸಿದ ನನ್ನ ಮಾಧವನು"-ಎಂದು ನಾನು ಹೇಳಿದಮಾತ್ರಕ್ಕೆ ನನ್ನಲ್ಲಿ ಯಾವ ದೋಷಗಳೂ ಇನ್ನುಮೇಲೆ ಸಂಭವಿಸದೆ ಇರುವಂತೆ ಅವನು ನನ್ನಲ್ಲಿ ಪ್ರವೇಶಿಸಿ ಜ್ಞಾತಾಜ್ಞಾತ ಸಕಲ ದೋಷ ನಾಶಕನಾಗಿ ನನಗೆ ಅಮೃತಪ್ರಾಯನಾಗಿ, ಕಮಲನೇತ್ರನಾಗಿಯೂ ಪರ್ವತಸದೃಶನಾಗಿಯೂ ನಿಂತು ನಿರ್ದೋಷವಾದ ಸಕ್ಕರೆಯ ಗಟ್ಟಿಯಂತೆ ಅತ್ಯನ್ತ ಭೋಗ್ಯನಾಗಿದ್ದಾನೆ.

(೪) **ಗೋವಿನ್ದನ್ ಕುಡಕ್ಕೂತ್ತನ್, ಕೋವಲನೆನ್ರೆನ್ರೇ ಕುನಿತ್ತು,**
**ತೇವುಮ್ ತನ್ನೈಯುಮ್ ಪಾಡಿಯಾಡತ್ತಿರುತ್ತಿ, ಯೆನ್ನೈಕ್**
**ಕೊಣ್ಡೆನ್**
**ಪಾವನ್ತನ್ನೈಯುಮ್, ಪಾಱಕ್ಕೈತ್ತೆಮರೇೞೇೞ್ ಪಿಱಪ್ಪುಮ್,**
**ಮೇವುಮ್ ತನ್ಮೈಯುಮಾಕ್ಕಿನಾನ್, ವಲ್ಲನೆಮ್ಪಿರಾನ್ ವಿಟ್ಟುವೇ.**

ಪ್ರ॥ ವಲ್ಲನ್ - ಸರ್ವಶಕ್ತನಾದ, ವಿಟ್ಟು-ವಿಷ್ಣುವು (ಸರ್ವವ್ಯಾಪಕನು), ಎಮ್‌ಪಿರಾನ್ - ನಮ್ಮ ಸ್ವಾಮಿಯು, ಗೋವಿನ್ದನ್ - ಪಶುಸಮೃದ್ಧಿಯುಳ್ಳವನು, ಕುಡಕ್ಕೂತ್ತನ್-ಘಟಲೀಲಾಲೋಲನು, ಕೋವಲನ್-ಗೋಪಾಲಕನು, ಎನ್ರು ಎನ್ರು -ಎಂದು ಅನೇಕಾವೃತ್ತಿ ಹೇಳಿ, ಕುನಿತ್ತು - ನರ್ತನಮಾಡಿ, ತೇವುಮ್ - ಪರತ್ವವನ್ನೂ, ತನ್ನೈಯುಮ್-ತನ್ನ ಸೌಶೀಲ್ಯವನ್ನೂ, ಪಾಡಿ-ಸ್ತೋತ್ರಮಾಡಿ ಹಾಡಿ, ಆಡ-ಸಂಚರಿಸುವಂತೆ, ತಿರುತ್ತಿ-ಪರಿಷ್ಕರಿಸಿ, ಎನ್ನೈ-ನನ್ನನ್ನು, ಕೊಣ್ಡು-ಸ್ವೀಕರಿಸಿ, ಎನ್-ನನ್ನ, ಪಾವನ್ತನ್ನೈಯುಮ್ - ಪಾಪಗಳನ್ನೂ, ಪಾಱ-ಓಡುವಂತೆ, ಕೈತ್ತು-ದೂರ ಹೋಗಲಾಡಿಸಿ, ಎಮರ್ - ನಮ್ಮವರು, ಏೞೇೞ್ ಪಿಱಪ್ಪುಮ್-ಏಳೇಳು ಜನ್ಮಗಳಲ್ಲೂ, ಮೇವುಮ್ - ತನ್ನನ್ನೇ ಹೊಂದುವ, ತನ್ಮೈಯುಮ್-ಸ್ವಭಾವವುಳ್ಳವರಾಗುವಂತೆ, ಆಕ್ಕಿನಾನ್-ಮಾಡಿದನು.

( ಸ–ಗಾ-ರ || )—

ಗೋವಿನ್ದೋ ಮಮ ನಾಯಕಃ ಪ್ರಥುರಸೌ ಜಿಷ್ಣುರ್ಘಟೈರ್ಲೀಲಯಾ
ಗೋಪಾಲೋ ವಿಹರನ್ಮಹಾನಿತಿ ಪೃಥಕ್ ಸಙ್ಕೀರ್ತ್ಯ ನೃತ್ತಾದಿಭಿಃ |
ಸೋಽಹಂ ಯಾಮಿ ಚ ಸಂಚರನ್ಮಮ ಮಹಾಪಾಪಾವಳಿಂ ಧ್ವಂಸಯನ್
ಮದ್ವಂಶ್ಯಾಂಶ್ಚ ಸ ಸಪ್ತಸಪ್ತ ಪುರುಷಾನ್ ವಿಷ್ಣುರ್ನಿಜಾನಾತನೋತ್ ||

ತಾ|| "ಸರ್ವಶಕ್ತನಾದ ವಿಷ್ಣುವೇ ನಮ್ಮ ಸ್ವಾಮಿಯು, ಪಶುಸಮೃದ್ಧಿಯುಳ್ಳವನು, ಘಟಲೀಲಾಲೋಲನು, ಗೋಪಾಲಕನು"—ಎಂದು ಅನೇಕಾವೃತ್ತಿ ಹೇಳಿ ನರ್ತನಮಾಡಿ ನಾನು ಅವನ ಪರತ್ವವನ್ನೂ ಸೌಶೀಲ್ಯವನ್ನೂ ಹಾಡಿ ಆಡುವಂತೆ ನನ್ನನ್ನು ಸಂಸ್ಕರಿಸಿ ಅಂಗೀಕರಿಸಿ, ನನ್ನ ಪಾಪಗಳನ್ನೆಲ್ಲಾ ಓಡಿಸಿ, ಏಳೇಳು ಜನ್ಮಗಳಲ್ಲೂ ನಮ್ಮ ವಂಶದವರೆಲ್ಲಾ ತನ್ನನ್ನೇ ಹೊಂದುವಂತೆ ಅವರ ವಿಷಯದಲ್ಲೂ ಪರಮಾನುಗ್ರಹವಂ ಮಾಡಿರುತ್ತಾನೆಂದು ತಾತ್ಪರ್ಯ.

(೫) ವಿಟ್ಟಿಲಙ್ಗು ಶೆಂಶೋದಿ, ತಾಮರೈಪಾದಙ್ಗಳ್ ಕೈಕಳ್ ಕಣ್‌ಕಳ್,
ವಿಟ್ಟಿಲಙ್ಗು ಕರುಂಶುಡರ್ ಮಲೈಯೇ ತಿರುವುಡಮ್ಬು,
ವಿಟ್ಟಿಲಙ್ಗು ಮದಿಯಮ್ ಶೀರ್ ಶಙ್ಗು ಶಕ್ಕರಮ್ ಪರಿದಿ,
ವಿಟ್ಟಿಲಙ್ಗು ಮುಡಿಯಮ್ಮಾನ್ ಮದುಶೂದನ್ ತನಕ್ಕೇ.

ಪ್ರ|| ವಿಟ್ಟು–ವಿಷ್ಣುವಾಗಿ, ವಿಟ್ಟು–ಸರ್ವತ್ರ ವ್ಯಾಪಿಸಿ, ಇಲಙ್ಗು–ಪ್ರಕಾಶಿಸುವ, ಮುಡಿ – ಕಿರೀಟವುಳ್ಳವನಾದ, ಅಮ್ಮಾನ್–ಸ್ವಾಮಿಯಾದ, ಮಧುಸೂದನ್ ತನಕ್ಕು–ಮಧುಸೂದನನಿಗೆ, ಇಲಙ್ಗು–ಪ್ರಕಾಶಿಸುವ, ಶೆಂಶೋದಿ–ಕೆಂಪಾದ ಕಾನ್ತಿಯುಳ್ಳ, ತಾಮರೈಯೇ–ತಾವರೆಹೂವೇ, ಪಾದಙ್–ಪಾದಗಳು, ಕೈಕಳ್–ಹಸ್ತಗಳು, ಕಣ್‌ಕಳ್–ನೇತ್ರಗಳು. ವಿಟ್ಟು–ವಿಕಸಿತವಾಗಿ, ಇಲಙ್ಗು–ಪ್ರಕಾಶಿಸುತ್ತಿರುವ, ಕರುಂಶುಡರ್ ಮಲೈಯೇ – ನೀಲಕಾನ್ತಿಯುಳ್ಳ ಪರ್ವತವೇ, ತಿರುವುಡಮ್ಬು–ದಿವ್ಯಶರೀರವು. ಶೀರ್–ರಮ್ಯವಾದ, ಶಙ್ಗು–ಶಂಖವು, ವಿಟ್ಟು–ವಿಸ್ತರಿಸಿ, ಇಲಙ್ಗು–ಪ್ರಕಾಶಿಸುವ, ಮದಿಯಮೇ – ಚಂದ್ರನೇ (ಚಂದ್ರನಂತೆ ಇದೆ) ಶಕ್ಕರಮ್–ಚಕ್ರವು, ವಿಟ್ಟು ಇಲಙ್ಗು–ವಿಸ್ತರಿಸಿ ಪ್ರಕಾಶಿಸುವ, ಪರಿದಿಯೇ–ಆದಿತ್ಯನೇ. (ಸೂರ್ಯನಂತೆಯೇ ಇದೆ.)

( ಸ-ಗಾ-ರ ॥ )—

ವಿಷ್ಣೋೀರಸ್ಯ ಮಮ ಪ್ರಭೋಸ್ಸುರುಚಿರಶ್ರೀಮೌಳಿಭೂಷಾಭೃತೋ
ದಿವ್ಯಂ ಭಾತಿ ಸರೋಜಮೇವ ಚರಣೌ ಹಸ್ತೌ ಚ ನೇತ್ರೇ ಹರೇಃ ।
ದೀಪ್ತೋ ನೀಲಮಹಾದ್ರಿರೇವ ಹಿ ತನುಶ್ಚನ್ದ್ರೋಽಸ್ತಿ ಶಙ್ಖೋ ಮಹಾ-
ನಾದಿತ್ಯೋ ಮಧುಸೂದನಸ್ಯ ರುಚಿರಶ್ಚಕ್ರಾಯುಧಾತ್ಮಾ ವಿಭೋಃ ॥

ತಾ॥ ಸರ್ವವ್ಯಾಪಿಯಾಗಿಯೂ, ದಿವ್ಯ ಕಿರೀಟಧಾರಿಯಾಗಿಯೂ, ವಿಷ್ಣುರೂಪಿಯಾಗಿಯೂ ಇರುವ ನನ್ನ ಸ್ವಾಮಿಯಾದ ಮಧುಸೂದನನ ಚರಣ ಹಸ್ತ ನೇತ್ರಗಳು ಕಮಲಗಳಂತೆ ಇವೆ; ದಿವ್ಯ ಶರೀರವು ನೀಲಮಣಿಪರ್ವತದಂತೆ ಇದೆ, ರಮ್ಯವಾದ ಶಂಖವು ಚನ್ದ್ರನಂತೆಯೂ, ಚಕ್ರವು ಸೂರ್ಯನಂತೆಯೂ ಚೆನ್ನಾಗಿ ಪ್ರಕಾಶಿಸುತ್ತಿವೆ. (ನನ್ನೊಡನೆಯೂ ನನ್ನ ವಂಶದವರೊಡನೆಯೂ ಸೇರಿದಮೇಲೆ ಅವನಿಗೆ ಇಂತಹ ದಿವ್ಯತೇಜಃಪ್ರಕಾಶವು ಉಂಟಾಯಿತೆಂದು ತಾತ್ಪರ್ಯ.)

(೭-) ಮದುಶೂದನೈಯನ್ಱಿ ಮಱ್ಱಿಲೇನೆನ್ಱೆತ್ತಾಲುಮ್
ಕರುಮಮಿನ್ಱಿ,
ತುದಿಶೂೞ್ನ್ದ ಪಾಡಲ್‌ಕಳ್, ಪಾಡಿಯಾಡ ನಿನ್ಱೂೞಿಯೂೞಿ
ತ್ತೊಱುಮ್,
ಎದಿರ್‌ಶೂೞಲ್ ಪುಕ್ಕೆನೈತ್ತೋರ್ ಪಿಱಪ್ಪುಮೆನಕ್ಕೇ
ಯರುಳ್‌ಕಳ್ ಶೆಯ್ಯ,
ವಿದಿ ಶೂೞ್ನ್ದದಾಲೆನಕ್ಕೇಲಮ್ಮಾನ್ ತಿರಿವಿಕ್ಕಿರಮನೈಯೇ.

ಪ॥ ಮದುಶೂದನೈಯನ್ಱಿ-ಮಧುಸೂದನನನ್ನು ಬಿಟ್ಟು, ಮಱ್ಱು ಇಲೇನ್-ಬೇರೆಯಾರನ್ನೂ (ನಾನು) ಆಶ್ರಯಿಸಿಲ್ಲ; ಎನ್ಱು-ಎಂದು, ಎತ್ತಾಲುಮ್-ಯಾವ ಪದಾರ್ಥದಿಂದಲೂ, ಕರುಮಮ್ – ಒಂದು ಕಾರ್ಯವೂ, ಇನ್ಱಿ-ಇಲ್ಲದೆ, ತುದಿ-ಸ್ತುತಿ (ಸ್ತೋತ್ರ)ಗಳಿಂದ, ಶೂೞ್ನ್ದ-ವ್ಯಾಪ್ತವಾದ, ಪಾಡಲ್‌ಕಳ್-ಕೀರ್ತನಗಳನ್ನು, ನಿನ್ಱು-ಉದ್ದೇಶಪೂರ್ವಕವಾಗಿ ನಿಂತು, ಪಾಡಿ-ಹಾಡಿ, ಆಡ-ಆಡುವಂತೆ, ಊೞಿಊೞಿತೊಱುಮ್-ಪ್ರತಿಕಲ್ಪದಲ್ಲೂ, ಎನೈತ್ತು-ಅನೇಕಗಳಾದ, ಓರ್-ಅದ್ವಿತೀಯವಾದ, ಪಿಱಪ್ಪುಮ್-ಜನ್ಮಗಳಲ್ಲೆಲ್ಲಾ, ಎದಿರ್ ಶೂೞಲ್ ಪುಕ್ಕು-(ನನಗೆ) ಎದುರಿಗೆ ಸುತ್ತಿಸುತ್ತಿ ಅವತರಿಸಿ, ಎನಕ್ಕೇ-ನನಗೋಸ್ಕರವೇ, ಅರುಳ್‌ಕಳ್-ಉಪಕಾರಗಳನ್ನು, ಶೆಯ್ಯ-ಮಾಡುವುದಕ್ಕೆ, ಎನಕ್ಕು ಎಲ್-ನನ್ನ ವಿಷಯದಲ್ಲಿ

ಅಂಗೀಕಾರವುಳ್ಳವನಾಗಿರುವ, ಅವರ್ಮ್ಮಾ-ಸ್ವಾಮಿಯಾದ, ತಿರುವಿಕ್ಕಿರನುಕ್ಕೈ-ತ್ರಿವಿಕ್ರಮನನ್ನು, ಪಿಡಿ-ಕೃಪಾವಿಧಿಯು, ಶೂಳ್ನ್ದದು-ಸುತ್ತಿಕೊಂಡಿದೆ.

( ಶ-ಗಾ-ರ || )—

**ನಾನ್ಯಂ ಶ್ರೀಮಧುಸೂದನಾತ್ಕಿಲ ಪರಂ ಪ್ರಾಪ್ಯಂ ಭಜೇಽಹಂ ಸದಾ**
**ಕಾರ್ಯಂ ಮೇ ನ ಕಿಲಾಪರೈರಿತಿ ಹರಿಂ ತಂ ಮೇಽದ್ಯ ಪದ್ಯೈಸ್ತುವನ್ |**
**ಏವಂ ಕಲ್ಪಸಹಸ್ರತೋಽಪಿ ವಿವಿಧಾಂ ಜನ್ಮಾವಳೀಂ ಮೇ ಸ್ವಯಂ**
**ಜ್ಞಾತ್ವಾ ಮೇಽಭಿಮುಖೋ ದಯಾಳುರವಶೋ ದತ್ತೇಽಖಿಲಂ ತ್ರಿಕ್ರಮಃ||**

ತಾ|| ಮಧುಸೂದನನನ್ನು ಬಿಟ್ಟು ಬೇರೆ ಯಾರನ್ನೂ ನಾನು ಆಶ್ರಯಿಸಿಲ್ಲವೆಂದು, ತದಿತರವ್ಯಾವೃತ್ತನಾಗಿ ನಾನು ಸ್ತುತಿರೂಪವಾಗಿ ಪದ್ಯಗಳನ್ನು ರಚಿಸಿ ಹಾಡುತ್ತಲೂ ಆಡುತ್ತಲೂ ಕೃತಾರ್ಥನಾಗುವಂತೆ ಅನೇಕ ಕಲ್ಪಗಳಲ್ಲೂ ನನಗೋಸ್ಕರ ಅವತರಿಸಿ ನನ್ನನ್ನು ಅಂಗೀಕರಿಸಿದ ನನ್ನ ಸ್ವಾಮಿಯಾದ ತ್ರಿವಿಕ್ರಮನಲ್ಲಿ ಕೃಪಾಗುಣವು (ನನ್ನ ವಿಷಯದಲ್ಲಿ) ಪರಿಪೂರ್ಣವಾಗಿ ನೆಲಸಿ ಇದೆಯೆಂದ್ಯ ಭಾವವು.

(೭) ತಿರುವಿಕ್ಕಿರವೆ ಞ್ ಶೆನ್ದಾಮರೈಕ್ಕಣ್ಣೆಮ್ಮಾನೆನ್ ಶೆಙ್ಗನಿವಾಯ್,
ಉರುವಿಲ್ ಪೊಲಿನ್ದ ವೆಳ್ಳೈಪ್ಪಳಿಙ್ಗುನಿಱತ್ತನನೆನ್ಱೆನ್ಱು, ಉಳ್ಳಿ
ಪ್ಪರವಿಪ್ಪಣಿನ್ದು ಪಲ್ಲೂೞಿಯೂೞಿ ನಿನ್ ಪಾದಪಙ್ಗಯಮೇ,
ಮರುವಿತ್ತೊೞುಮ್ ಮನಮೇ ತನ್ದಾಯ್, ವಲ್ಲೈ
ಕಾಣೆನ್ ವಾಮನನೇ.

ಪ್ರ|| ತಿರುವಿಕ್ಕಿರಮ್ಮ-ತ್ರಿವಿಕ್ರಮನು, ಶೆನ್ದಾಮರೈಕ್ಕಣ್-ಕೆಂದಾವರೆಯಂತೆ ಕಣ್ಣುಗಳುಳ್ಳ, ಎಮ್ಮಾ-ನನ್ನ ಸ್ವಾಮಿಯು, ಎನ್-ನನ್ನ, ಶೆಙ್ಗನಿವಾಯ್-ಕೆಂಪಾದ ಬಿಂಬಫಲದಂತಿರುವ ವಕ್ತ್ರವುಳ್ಳ, ಉರುವಿಲ್‌ಪೊಲಿನ್ದ-ರೂಪದಲ್ಲಿ (ಶರೀರದಲ್ಲಿ) ಪ್ರಕಾಶಿಸುವ, ವೆಳ್ಳೈಪ್ಪಳಿಙ್ಗು-ಬಿಳೀಕನ್ನಡಿಯಂತೆ ಇರುವ, ನಿಱತ್ತನನ್-ದನ್ತಕಾನ್ತಿಯುಳ್ಳವನು, ಎನ್ಱೆನ್ಱು-ಎಂದು ಅನೇಕಾವೃತ್ತಿಹೇಳಿ, ಉಳ್ಳಿ-ಧ್ಯಾನ ಮಾಡಿ, ಪರವಿ-ಸ್ತೋತ್ರಮಾಡಿ, ಪಣಿನ್ದು-ನಮಸ್ಕರಿಸಿ, ಪಲ್‌ಊೞಿ ಊೞಿ-ಅನೇಕ ಕಲ್ಪಗಳಪರ್ಯನ್ತ, ನಿನ್-ನಿನ್ನ, ಪಾದಪಙ್ಗಯಮೇ-ಚರಣಕಮಲಗಳಲ್ಲೇ, ಮರುವಿ ತೊೞುಮ್-ವಿಶ್ವಾಸದಿಂದ ಕೈಂಕರ್ಯಮಾಡುವ, ಮನಮ್-ಮನಸ್ಸನ್ನೇ, ತನ್ದಾಯ್-(ನನಗೆ) ಅನುಗ್ರಹಿಸಿರುತ್ತೀಯೆ; ಎನ್ ವಾಮನನೇ-ನನ್ನ ವಾಮನಮೂರ್ತಿಯೇ, ವಲ್ಲೈಕಾಣ್-(ನೀನು) ಸಮರ್ಥನೇಸರಿ.

( ಸ-ಗಾ-ರ || )—

**ಶ್ರೀಶ ತ್ರಿವಿಕ್ರಮ ! ಪುಣ್ಡರೀಕನಯನ ! ಸ್ವಾಮಿನ್ ! ಸುಬಿಮ್ಬಾಧರ !**
**ತ್ವಂ ಭಾಸ್ಯೇವ ಶುಚಿಸ್ಮಿತಸ್ತ್ವಿತಿ ಪೃಥಕ್ ತ್ವತ್ಸದ್ಗುಣಾಂಸ್ತ್ವಿನ್ತ್ಯರ್ಯ |**
**ಶಂಸಂಶ್ಚ ಪ್ರಣಮನ್ ಪದಾಬ್ಜಯುಗಳಂ ಕಲ್ಪೇಷ್ವನೇಕೇಷು ತೇ**
**ಸವ್ರಾಪ್ಯಾಸ್ಮಿ ಹಿ ದಾಸ್ಯಸಕ್ತಹೃದಯಸ್ತ್ವಂ ವಾಮನೋ ಮೇ ಪ್ರಭುಃ ||**

ತಾ|| "ತ್ರಿವಿಕ್ರಮನಾಗಿಯೂ, ಕಮಲನಯನನಾಗಿಯೂ, ಬಿಂಬಾಧರ ಶೋಭಿತನಾಗಿಯೂ, ಶುಭ್ರದನ್ತನಾಗಿಯೂ, ಶುಚಿಸ್ಮಿತನಾಗಿಯೂ ಇರುವ ನನ್ನ ಸ್ವಾಮಿಯೇ!" ಎಂದು ನಿನ್ನ ಗುಣಗಳನ್ನು ಅನೇಕಾವೃತ್ತಿ ಹೇಳಿ, ಧ್ಯಾನ ಗಾನ ನಮಸ್ಕಾರಾದಿಗಳಿಂದ ಅನೇಕ ಕಲ್ಪಗಳಲ್ಲೂ ನಿನ್ನ ಚರಣಾರವಿನ್ದ ಕೈಂಕರ್ಯವಂ ಮಾಡುವ ಮನಸ್ಸನ್ನೇ ನನಗೆ ಅನುಗ್ರಹಿಸಿರುತ್ತೀಯೆ. ಆದುದರಿಂದ, ಎಲೈ ನನ್ನ ವಾಮನಮೂರ್ತಿಯೇ ! ನೀನು ಸಮರ್ಥನೇಸರಿ—(ನೀನೇ ಸರ್ವಶಕ್ತನಾದ ನನ್ನ ಸ್ವಾಮಿಯು ಎಂದು ಭಾವವು.)

(೮) ವಾಮನನ್ ಮರತಕವಣ್ಣನ್, ತಾಮರೈಕ್ಕಣ್ಣಿನನ್,
ಕಾಮನೈಪ್ಪಯನ್ದಾಯ್, ಎನ್ಱೆನ್ಱು ಉನ್ ಕಳಲ್ ಪಾಡಿಯೇ ಪಣಿನ್ದು,
ತೂಮನತ್ತನನಾಯ್ ಪ್ಪಿಱವಿತ್ತುಯರಿ ನೀಙ್ಗಿ, ಎನ್ನೈ
ತ್ತೀಮನಙ್ಕೆಡುತ್ತಾಯುನಕ್ಕೆನ್ ಶೆಯ್ಗೇನೆನ್ ತಿರೀದರನೇ.

ಪ್ರ|| ವಾಮನ್-ವಾಮನನೇ, ಎನ್ ಮರತಕವಣ್ಣಾ-ನನ್ನ ಮರತಕವರ್ಣನೇ, ತಾಮರೈಕ್ಕಣ್ಣಿನನ್-ತಾವರೆಯಂತೆ ಕಣ್ಣುಗಳುಳ್ಳವನೇ, ಕಾಮನೈ-ಮನ್ಮಥನನ್ನು, ಪಯನ್ದಾಯ್-ಹೆತ್ತವನೇ, ಎನ್ಱು ಎನ್ಱು-ಎಂದು ಅನೇಕಾವೃತ್ತಿಹೇಳಿ, ಉನ್‌ಕಳಲ್ -ನಿನ್ನ ಪಾದಗಳಲ್ಲಿ, ಪಾಡಿಪಣಿನ್ದು-ಹಾಡಿ ನಮಸ್ಕರಿಸಿ, ತೂಮನತ್ತನನಾಯ್-ಪರಿಶುದ್ಧವಾದ ಮನಸ್ಸುಳ್ಳವನಾಗಿ, ಪ್ಪಿಱವಿ-ಜನ್ಮಗಳಲ್ಲುಂಟಾದ, ತುಯರಿ-ಸುತ್ತಿ ಸುತ್ತಿಬರೋಣವು (ಚಕ್ರಭ್ರಮಣವು), ನೀಙ್ಗ - ತೀರುವಂತೆ, ಎನ್ನೈ-ನನ್ನನ್ನು, ತೀಮನಮ್ ಕೆಡುತ್ತಾಯ್-ಕೆಟ್ಟಮನಸ್ಸನ್ನು ನಾಶಪಡಿಸಿ ಪರಿಷ್ಕರಿಸಿ ಇರುತ್ತೀಯೆ. ಎನ್ ತಿರೀದರನೇ-ನನ್ನ ಶ್ರೀಧರನೇ, ಉನಕ್ಕು-ನಿನಗೆ, ಎನ್‌ಶೆಯ್ ಕೇನ್-ಯಾವ ಪ್ರತ್ಯುಪಕಾರವಂ ಮಾಡಬಲ್ಲೆನು ?

( ಸ-ಗಾ-ರ || )—

**ಹೇ ! ಶ್ರೀವಾಮನ ! ನೀಲರತ್ನನಿಭ ! ಮೇ ಪದ್ಮಾಕ್ಷ! ಕಾಮೋದ್ಭವೇ-**
**ತ್ಯೇವಂ ತ್ವತ್ಪದಪದ್ಮಕೀರ್ತನಪರೋ ನತ್ವಾಽಸ್ಮಿ ಶುದ್ಧಾಶಯಃ |**
**ಜಾಡ್ಯಂ ಜನ್ಮಭವಂ ಪ್ರಣಾಶ್ಯ ಮನಸೋ ದೋಷಾನ್ ಪ್ರಹತ್ಯಾಪಿ ಮೇ**
**ಸ್ವಾಮಿನ್ ಪೂರ್ಣಮಹಾಶ್ರಿಯಃ! ಕಿಮು ಹರೇ! ಕುರ್ಯಾಂ ತವ ಶ್ರೀಧರ ? ||**

ತಾ|| ಎಲೈ ವಾಮನನೇ ! ಮರತಕವರ್ಣನೇ ! ಪದ್ಮಪತ್ರಾಕ್ಷನೇ! ಮನ್ಮಥ ಜನಕನೇ ! ಎಂದು ಅನೇಕಾವೃತ್ತಿ ಸಂಕೀರ್ತನಮಾಡಿ, ಗಾನದೊಡನೆ ನಿನ್ನ ಪಾದಗಳಲ್ಲಿ ನಮಸ್ಕರಿಸಿ, ಪರಿಶುದ್ಧಚಿತ್ತನಾಗಿ, ನಾನು ನನ್ನ ಸಂಸಾರಚಕ್ರಭ್ರಮಣ ವನ್ನು ನಿವಾರಣಮಾಡುವಂತೆ ದುಷ್ಟಭಾವನಾಶವಂ ಮಾಡಿ, ನನ್ನ ಮನಸ್ಸನ್ನು ನೀನು ಪರಿಷ್ಕರಿಸಿರುತ್ತೀಯೆ. ಎಲೈ ಶ್ರೀಧರನೇ! ನಿನಗೆ ನಾನು ಯಾವ ಪ್ರತ್ಯುಪ ಕಾರವಂ ಮಾಡಬಲ್ಲೆನು ?—(ಸರ್ವೈಶ್ವರ್ಯಪರಿಪೂರ್ಣನಾದ ನಿನಗೆ ನಾನು ಏನೂ ಉಪಕಾರ ಮಾಡಲಾರೆನೆಂದು ಭಾವವು.)

(೯) ತಿರೀ ಇದರನ್ ಶೆಯ್ಯ ತಾಮರೈಕ್ಕಣ್ಣನ್ ಎನ್ರೆನ್ರೆ ಇರಾಪ್ಪಕಲ್ ವಾಯ್
ವೆರೀಇ ಅಲಮನ್ದು ಕಣ್‌ಕಳ್ ನೀರ್ ಮಲ್‌ಕಿ, ವೆವ್ವುಯಿರ್‌ತ್ತು
ಯಿರ್‌ತ್ತು,
ಮರೀಇಯ ತೀವಿನೈ ಮಾಳ ಇನ್ಬಮ್ ವಳರ, ವೈಕಲ್‌ವೈಕಲ್,
ಇರೀಇ ಉನ್ನೈ ಎನ್ನುಳ್ ವೈತ್ತನೈ ಎನ್ನಿರುಡೀಕೇಶನೇ.

ಪ್ರ || ತಿರೀ ಇದರನ್-ಲಕ್ಷ್ಮೀದೇವಿಯನ್ನು ವಕ್ಷಸ್ಥಲದಲ್ಲಿ ಧರಿಸಿರುವವನು, ಶೆಯ್ಯತಾಮರೈಕ್ಕಣ್ಣನ್ – ಕೆಂದಾವರೆಯಂತೆ ಕಣ್ಣುಗಳುಳ್ಳವನು, ಎನ್ರು ಎನ್ರು- ಎಂದು ಹೇಳಿ ಹೇಳಿ, ಇರಾಪ್ಪಕಲ್ – ರಾತ್ರಿಯೂ ಹಗಲೂ, ವಾಯ್‌ವೆರೀಇ-ಬಾಯಿಂದ ಕನವರಿಸುತ್ತ, ಅಲಮನ್ದು-ಭ್ರಮಿಸಿ, ಕಣ್‌ಕಳ್‌ನೀರ್‌ಮಲ್‌ಕಿ-ಕಣ್ಣು ಗಳಲ್ಲಿ ನೀರುತುಂಬಿಕೊಂಡು, ವೆಮ್ ಉಯಿರ್‌ತ್ತುಯಿರ್‌ತ್ತು-ಉಷ್ಣವಾಗಿ ಉಸು ರುಬಿಟ್ಟು ಉಸುರುಬಿಟ್ಟು ಸನ್ತಪ್ತನಾದ ನನ್ನನ್ನು, ಮರೀಇಯ-ಸೇರಿದ, ತೀವಿನೈ –ದುಷ್ಕೃತ್ಯಗಳು (ಪಾಪಗಳು), ಮಾಳ-ನಾಶಹೊಂದುವಂತೆ, ಇನ್ಬಮ್‌ವಳರ-ಆನನ್ದವು ವೃದ್ಧಿಹೊಂದುವಂತೆ, ವೈಕಲ್‌ವೈಕಲ್-ಪ್ರತಿದಿನವೂ, ಉನ್ನೈ-ನಿನ್ನನ್ನು, ಎನ್ನುಳ್-ನನ್ನ ಮನಸ್ಸಿನಲ್ಲಿ, ಇರೀ ಇವೈತ್ತನೈ-ಇರಿಸಿ ಇರುತ್ತೀಯೆ; ಎನ್ ಇರುಡೀ ಕೇಶನೇ-ನನ್ನ ಹೃಷೀಕೇಶನೇ !

( ಶ-ಗಾ-ರ ॥ )—

**ಸ್ವಾಮಿನ್ ! ಶ್ರೀಧರ ! ರಮ್ಯಪದ್ಮನಯನೇತ್ಯೇವಂ ಹಿ ವಕ್ತ್ರಾನ್ದಿವಂ**
**ಜಲ್ಪನ್ ಭ್ರಾನ್ತ ಇವಾಶ್ರುಪೂರ್ಣನಯನಸ್ಸನ್ತಪ್ತಚಿತ್ತೋ ಽಭವಮ್ ।**
**ತಾಮಾರ್ತಿಂ ಮಮ ನಾಶಯನ್ ಪ್ರಮುದಿತಂ ಕುರ್ವನ್ ಸದಾ ಮಾಂ ಹರೇ!**
**ತ್ವಂ ಮೇ ಭಾಸಿ ಹೃದಿ ಸ್ವಯಂ ಕಿಲ ಹೃಷೀಕೇಶ! ಪ್ರತಿಷ್ಠಾಪಿತಃ॥**

ತಾ॥ ಶ್ರೀಧರನೆಂದೂ ಪದ್ಮಾಕ್ಷನೆಂದೂ ಅನೇಕಾವೃತ್ತಿ ಹೇಳಿ, ರಾತ್ರಿಯೂ ಹಗಲೂ ಬಾಯಿಂದ ಕನವರಿಸುತ್ತ, ಭ್ರಾನ್ತನಾಗಿಯೂ ಅಶ್ರುಪೂರ್ಣನಾಗಿಯೂ ಉಷ್ಣವಾಗಿ ನಿಟ್ಟುಸಿರುಬಿಡುತ್ತ ಅತ್ಯನ್ತ ಸನ್ತಪ್ತನಾದ ನನ್ನ ಮಹಾಪಾಪಗಳೆಲ್ಲಾ ನಾಶಹೊಂದುವಂತೆಯೂ, ಆನನ್ದವು ವೃದ್ಧಿಹೊಂದುವಂತೆಯೂ, ಪ್ರತಿದಿನವೂ ನನ್ನ ಮನಸ್ಸಿನಲ್ಲಿ ನಿನ್ನನ್ನು ದೃಢವಾಗಿ ಇರಿಸಿ ಇರುತ್ತೀಯೆಯಲ್ಲವೇ ನನ್ನ ಹೃಷೀಕೇಶನೇ!—ಎಂದು ಕೃತಜ್ಞತೆಯಿಂದ ಕೊಂಡಾಡುತ್ತಾರೆ.

(೧೦) ಇರುಡೀಕೇಶನೆಮ್ಬಿರಾನಿಲಙ್ಗೈ ಯರಕ್ಕರ್ ಕುಲಮ್,
ಮುರುಡು ತೀರ್ತ್ತ ಪಿರಾನೆಮ್ಮಾನಮರರ್ ಪೆಮ್ಮಾನೆನ್ರೆನ್ರು,
ತೆರುಡಿಯಾಕಿಲ್ ನೆಞ್ಜೇ! ವಣಙ್ಗು ತಿಣ್ಣಮ್ ಅಱಿ ಯಱಿನ್ದು,
ಮರುಡಿಯೇಲುಮ್ ವಿಡೇಲ್ ಕಣ್ಡಾಯ್ ನಮ್ಬಿ ಪರ್ಪ
ನಾಬನ್ಯೆಯೇ.

ಪ್ರ॥ ಇರುಡೀಕೇಶನ್—ಹೃಷೀಕೇಶನು, ಎಮ್ಬಿರಾನ್—ನಮಗೆ ಉಪಕಾರಕನಾದ ಸ್ವಾಮಿಯು; ಇಲಙ್ಗೈ – ಲಂಕಾನಗರದ, ಅರಕ್ಕರ್‌ಕುಲಮ್—ರಾಕ್ಷಸಕುಲಕ್ಕೆ, ಮುರುಡು—ಆಧಾರಭೂತನಾದ ರಾವಣನನ್ನು, ತೀರ್ತ್ತಪಿರಾನ್ — ಧ್ವಂಸಮಾಡಿದ ಮಹಾಸ್ವಾಮಿಯು; ಅಮರರ್ ಪೆಮ್ಮಾನ್—ನಿತ್ಯಸೂರೀಶ್ವರನು, ಎನ್ರು ಎನ್ರು—ಎಂದು ಹೇಳಿ ಹೇಳಿ, ನೆಞ್ಜೇ—ಮನಸ್ಸೇ, ತೆರುಡಿಯಾಕಿಲ್—(ನೀನು) ನಿರ್ಮಲಜ್ಞಾನವಂ ಪಡೆದಿದ್ದರೆ, ವಣಙ್ಗು—(ಅವನಿಗೆ) ನಮಸ್ಕಾರಮಾಡು; ತಿಣ್ಣಮ್—ದೃಢವಾಗಿ (ಸ್ಥಿರವಾಗಿ), ಅಱಿ—ಚಿನ್ತಿಸು; ಅಱಿನ್ದು—ಇಂತಹ ಜ್ಞಾನವಂ ಪಡೆದು, ಮರುಡಿಯೇಲುಮ್—ಮೋಹವು (ನಿನಗೆ) ಪ್ರಾಪ್ತವಾದಾಗ್ಯೂ, ನಮ್ಬಿ—ಕಲ್ಯಾಣಗುಣಪೂರ್ಣನಾದ, ಪರ್ಪನಾಬನ್ಯೆ—ಆ ಪದ್ಮನಾಭನನ್ನೇ, ವಿಡೇಲ್‌ಕಣ್ಡಾಯ್—ಎಂದಿಗೂ ಬಿಡದೆ ಆಶ್ರಯಿಸು.

( ಸ–ಗಾ–ರ ॥ )—

ಮನ್ಮಾಥ! ತ್ವಮುದಾರಸದ್ಗುಣ ! ಹೃಷೀಕೇಶಾಸಿ ಲಂಕೇಶಿತು–
ರ್ಹನ್ತಾ ತಸ್ಯ ದಶಾನನಸ್ಯ ಹಿ ಹರಿರ್ದೇವಾಧಿದೇವೋಽಚ್ಯುತಃ|
ಇತ್ಯೇವಂ ಮಮ ಮಾನಸ! ತ್ವಮನುಸನ್ಧಾಯ ಪ್ರಣಾಮಂ ಕುರು !
ಕ್ಷಿಪ್ರಂ ವಿದ್ಧಿ | ಯದಿ ಭ್ರಮೋಽಸ್ತಿ ಚ ಪುನರ್ಮಾ ಪದ್ಮನಾಭಂ ತ್ಯಜ ||

ತಾ|| ಹೃಷೀಕೇಶನು, ನನಗೆ ಉಪಕಾರಕನಾದ ಸ್ವಾಮಿಯು, ಲಂಕಾನಗರದ ರಾಕ್ಷಸಕುಲಾಧಿಪತಿಯ ಧ್ವಂಸಕನು, ನಿತ್ಯಸೂರೀಶ್ವರನು — ಎಂದು ಹೇಳಿ ಹೇಳಿ. ಎಲೈ ಮನಸ್ಸೇ ! ನೀನು ನಿರ್ಮಲಜ್ಞಾನವಂ ಪಡೆದಿದ್ದರೆ, ನೀನು ಅವನಿಗೆ ನಮಸ್ಕಾರಮಾಡು ; ಅವನನ್ನೇ ಚಿನ್ತಿಸಿ ಧ್ಯಾನಮಾಡು. ಇನ್ತಹ ಜ್ಞಾನವಂ ಪಡೆದ ಮೇಲೂ ನಿನಗೆ ಅಜ್ಞಾನವು (ಮೋಹವು) ಉಂಟಾದಾಗ್ಯೂ ಕಲ್ಯಾಣಗುಣಪೂರ್ಣನಾದ ಆ ಪದ್ಮನಾಭನನ್ನು ಎಂದಿಗೂ ಬಿಡದೆ ಆಶ್ರಯಿಸುತ್ತಿರು; ಕಂಡೆಯಾ ?— ಎಂದು ತಮ್ಮ ಮನಸ್ಸಿಗೆ ಬೋಧಿಸುತ್ತಾರೆ.

(೧೧) ಪಱ್ಪನಾಬನುಯರ್ವಱ ವುಯರುವರ್ ಪೆರುನ್ತಿಱಲೋನ್,
ಎಱ್ಪರನೆನ್ನೈ ಯಾಕ್ಕಿಕ್ಕೊಣ್ಡೆನಕ್ಕೇ ತನ್ನೈತ್ತನ್ದ
ಕಱ್ಪಕಮ್, ಎನ್ನಮುದಮ್ ಕಾರ್ಮುಗಿಲ್ ಪೋಲುಮ್
ವೇಙ್ಗಡನಲ್
ವೆಱ್ಪನ್, ವಿಶುಮ್ಬೋರ್ ಪಿರಾನೆನ್ದೈ ತಾಮೋದರನೇ.

ಪ್ರ|| ಪಱ್ಪನಾಬನ್–ಪದ್ಮನಾಭನು, ಉಯರ್ವುಱ ಅಱ – ಇತರರ ಉಚ್ಛ್ರಾಯವು ನಶಿಸುವಂತೆ, ಉಯರುಮ್–ಮೇಲಕ್ಕೆ ಪ್ರವರ್ಧಮಾನವಾದ, ಪೆರುಮ್ ತಿಱಲೋನ್–ಮಹಾಶಕ್ತಿಯುಳ್ಳವನು, ಎನ್ ಪರನ್–ನನ್ನಲ್ಲಿ ಪ್ರೀತಿಯುಳ್ಳ ಸ್ವಾಮಿಯು, ಎನ್ನೈಯಾಕ್ಕಿಕ್ಕೊಣ್ಡು–ನನ್ನನ್ನು ತನಗೆ ದಾಸನಾಗಿ ಮಾಡಿಕೊಂಡು, ಎನಕ್ಕೇ ತನ್ನೈತ್ತನ್ದ–ನನಗೇ ತನ್ನನ್ನು ತಂದುಕೊಟ್ಟ, ಕಱ್ಪಕಮ್ – ಕಲ್ಪವೃಕ್ಷವು, ಎನ್ ಅಮುದಮ್–ನನ್ನ ಅಮೃತವು, ಕಾರ್ಮುಗಿಲ್ಪೋಲುಮ್ – ನೀಲಮೇಘದಂತಿರುವ, ನಲ್ ವೇಙ್ಗಡವೆಱ್ಪನ್–ದಿವ್ಯವಾದ ವೇಂಕಟಾದ್ರಿಯನ್ನು ತನ್ನ ವಾಸಸ್ಥಾನವಾಗಿ ಉಳ್ಳವನು, ವಿಶುಮ್ಬೋರ್ಪಿರಾನ್ – ನಿತ್ಯಸೂರಿಗಳಿಗೆ ನಿರ್ವಾಹಕನು; ತಾಮೋದರನೇ – ಇಂತಹ ದಾಮೋದರನೇ, ಎನ್ದೈ – ನನಗೆ ತಂದೆಯಾದ ಸ್ವಾಮಿಯು.

( ಸ-ಗಾ-ರ || )—

**ಉತ್ತುಙ್ಗೋऽಸ್ತಿ ಹಿ ಪದ್ಮನಾಭ ಇಹ ಮೇ ಸ್ವಾಮೀ ಪರಶ್ಶಕ್ತಿಮಾ-**
**ಸ್ವೀಕೃತ್ಯಾಪಿ ಚ ಮಾಂ ಮಮಾಪಿ ವಿವಶಸ್ಸ್ವೀಕಲ್ಪಕಶ್ಚಾಮೃತಮ್ |**
**ನೀಲಾಮ್ಭೋದಸಮಶ್ಚ ವೇಂಕಟಗಿರೌ ಭಾತಿ ಸ್ವಯಂ ನಾಯಕ-**
**ಸ್ಸೂರೀಣಾಮಧಿಪಶ್ಚ ಕಾಸ್ತಿ ಚ ಹರಿರ್ದಾಮೋದರೋ ಮೇ ಪ್ರಭುಃ ||**

ತಾ|| ಪದ್ಮನಾಭನು, ಸರ್ವೋತ್ಕೃಷ್ಟಮಹಾಶಕ್ತಿಯುಕ್ತನು, ನನ್ನ ಪರಾತ್ಪರನು, ನನ್ನನ್ನು ವಶೀಕರಿಸಿ ನನಗೆ ತನ್ನನ್ನು ತಂದುಕೊಟ್ಟ ಕಲ್ಪವೃಕ್ಷವು, ನನ್ನ ಅಮೃತವು, ನೀಲಮೇಘಸದೃಶವಾದ ವೇಂಕಟಾದ್ರಿಗೆ ಅಧಿಪತಿ, ನಿತ್ಯಸೂರೀಶ್ವರನು,— ಇಂತಹ ದಾಮೋದರನೇ ನನಗೆ ತಂದೆಯಾದ ಮಹಾಸ್ವಾಮಿಯು. (ಇವನು ನನ್ನನ್ನು ಎಂದಿಗೂ ಕೈಬಿಡುವುದಿಲ್ಲವೆಂದು ಭಾವವು.)

(೧೨) ತಾಮೋದರನೈ ತ್ತನಿಮುದಲ್ವನೈ ಞಾಲಮುಣ್ಡವನೈ,
ಆರೋತರವಱಿಯ ವೊರುವರ್‌ಕ್ಕಾಱ್ಱೇ ತೊೞುಮವರ್‌ಕಳ್,
ತಾಮೋದರನುರುವಾಕಿಯ ಶಿವರ್ಕ್ಕುಮ್ ತಿಸೈಮುಕರ್ಕ್ಕುಮ್,
ಆರೋ ತರವಱಿಯ ವೆಮ್ಮಾನೈ ಯೆನ್ನಾೞಿವಣ್ಣನೈಯೇ.

ಪ್ರ|| ತಾಮೋದರನೈ-ದಾಮೋದರನಾದವನನ್ನು, ತನಿಮುದಲ್ವನೈ-ಅದ್ವಿತೀಯವಾದ ಕಾರಣವಸ್ತುವಾದವನನ್ನು, ಞಾಲಮುಣ್ಡವನೈ - ಸರ್ವಲೋಕಗಳನ್ನೂ, ಭಕ್ಷಿಸಿದವನನ್ನು, ತರಮ್ ಅಱಿಯ-ಬೇರೆ ಬೇರೆಯಾಗಿ ತಿಳಿಯಲು, ಒರುವರ್‌ಕ್ಕು ಆರೋ-ಯಾರಿಗಾದರೂ ಒಬ್ಬರಿಗೆ ಸಾಧ್ಯವೋ ? ಎಱ್ಱೇ ತೊೞುಮವರ್‌ಕಳ್-ಎಂದು ಸೇವಿಸುವವರಾಗಿ, ತಾಮೋದರ್ರ - ಆ ದಾಮೋದರನ, ಉರು ಆಕಿಯ-ಅವಯವಭೂತರಾದ, ಶಿವರ್ಕ್ಕುಮ್-ರುದ್ರನಿಗೂ, ತಿಸೈಮುಕರ್ಕ್ಕುಮ್-ಚತುರ್ಮುಖನಿಗೂ, ಎನ್-ನನ್ನ ಆೞಿವಣ್ಣನೈ-ಸಮುದ್ರದಂತೆ ರೂಪಗುಣಾದಿಗಳುಳ್ಳವನಾದ, ಎಮ್ಮಾನೈ-ನಮ್ಮ ಸ್ವಾಮಿಯನ್ನು, ತರಮ್ ಅಱಿಯ ಆರೋ-ಅಳತೆಮಾಡಿ ತಿಳಿಯಲು ಸಾಧ್ಯವೋ ?

( ಸ-ಗಾ-ರ || )—

**ಶ್ರೀದಾಮೋದರಮಾದಿಮೂಲಮಖಿಲಾನ್ ಲೋಕಾನ್ ಸ್ವಯಂ ಚೋದರೇ**
**ಬಿಭ್ರಾಣಂ ಕಥಮಪ್ರಮೇಯವಿಭವಂ ಜ್ಞಾತುಂ ವಯಂ ಶಕ್ನುಮಃ ? |**
**ಇತ್ಯೇವಂ ಹಿ ಚತುರ್ಮುಖೇಶ್ವರಮುಖಾ ದೇವಾಶ್ಚ ದಾಮೋದರ-**
**ಸ್ಯಾಂಶಾಸ್ಸ್ತೋತುಮನರ್ಹತಾಂ ಜಗುರಹೋ! ನಾಥಂ ನ ಮೇ ತೇ ವಿದುಃ ||**

ತಾ|| ದಾಮೋದರನು, ಅದ್ವಿತೀಯನಾದ ಕಾರಣವಸ್ತುವು, ಸರ್ವಲೋಕ ಭಕ್ಷಕನು—ಎಂದು (ಅವನ ಕೃತ್ಯಗಳು ನಾನಾವಿಧವಾಗಿದ್ದಾಗ್ಯೂ) ಬೇರೆ ಬೇರೆ ಯಾಗಿ ತಿಳಿದುಕೊಳ್ಳಲು ಯಾರಿಗೆತಾನೇ ಸಾಧ್ಯವಾದೀತು? —ಎಂದು ಅವನನ್ನೇ ಸೇವಿಸುತ್ತಿರುವ ಬ್ರಹ್ಮರುದ್ರರೂ ಆ ದಾಮೋದರನ ಅವಯವಭೂತರಾಗಿರುತ್ತಾ ರಷ್ಟೆ. ಅವರಿಗೆ ತಾನೇ ಸಮುದ್ರದಂತೆ ನೀಲವರ್ಣನಾಗಿ ಗಂಭೀರಸ್ವಭಾವನಾದ ನನ್ನ ಸ್ವಾಮಿಯನ್ನು ಪರಿಚ್ಛೇದಿಸಿ ತಿಳಿಯಲು ಸಾಧ್ಯವೋ ?—(ಇನ್ತಹ ಪರಾತ್ಪ ರನೇ ನನ್ನ ಸ್ವಾಮಿಯು) ಎಂದು ಭಾವವು.

(೧೩) ವಣ್ಣಮಾಮಣಿಚ್ಚೋದಿಯೈ ಯಮರರ್ ತಲೈಮಕನ್ನೈ,
ಕಣ್ಣನ್ನೈ ನೆಡುಮಾಲೈ ತ್ತೆನ್ಕುರುಕೂರ್ ಚ್ಚಡಕೋಪನ್,
ಪಣ್ಣಿಯ ತಮಿೞ್ಮಾಲೈಯಾಯಿರತ್ತುಳ್ಳಿವೈ ಪನ್ನಿರಣ್ಡುಮ್,
ಪಣ್ಣಿಲ್ ಪನ್ನಿರುನಾಮಪ್ಪಾಟ್ಟಣ್ಣಲ್ ತಾಳಣೈವಿಕ್ಕುಮೇ.

ಪ್ರ|| ವಣ್ಣಮ್ – ವರ್ಣಕಾನ್ತಿಯುಳ್ಳ, ಮಾಮಣಿ – ಶ್ಲಾಘ್ಯವಾದ ನೀಲ ರತ್ನದ, ಶೋದಿಯೈ–ತೇಜಸ್ಸುಳ್ಳ ಜ್ಯೋತಿರ್ಮಯನನ್ನು, ಅಮರರ್–ನಿತ್ಯಸೂರಿ ಗಳಿಗೆ, ತಲೈಮಕನ್ನೈ – ಶಿಖರವಾದವನನ್ನು, ಕಣ್ಣನ್ನೈ–ಶ್ರೀ ಕೃಷ್ಣರೂಪಿಯಾದವ ನನ್ನು, ನೆಡುಮಾಲೈ–(ಈ ಪ್ರಕಾರ) ಆಶ್ರಿತರಲ್ಲಿ ಅತ್ಯನ್ತ ಪ್ರೀತಿಯುಳ್ಳ ಭಗವನ್ತ ನನ್ನು, ತೆನ್ಕುರುಕೂರ್ ಶಡಕೋಪನ್–ರಮ್ಯವಾದ ಕುರುಕಾಪುರಿಯಲ್ಲಿ ಅವತರಿಸಿದ ಶ್ರೀ ಶಠಾರಿಮುನಿಯು, ಪಣ್ಣಿಯ–ಮಾಡಿದ (ರಚಿಸಿದ), ತಮಿೞ್ಮಾಲೈ–ದ್ರಾವಿಡ ಪ್ರಬನ್ಧರೂಪವಾದ ಮಾಲೆಯಾದ, ಆಯಿರತ್ತುಳ್–ಸಹಸ್ರಪದ್ಯಮಾಲೆಯೊಳು, ಪಣ್ಣಿಲ್–ಗಾನಾನುಗುಣವಾಗಿ, ಪನ್ನಿರುನಾಮಪ್ಪಾಟ್ಟು – (ಕೇಶವಾದಿ) ದ್ವಾದಶ ನಾಮ ಸಂಕೀರ್ತನರೂಪವಾಗಿರುವ, ಇವೈ ಪನ್ನಿರಣ್ಡುಮ್–ಈ ಹನ್ನೆರಡು ಪದ್ಯ ಗಳೂ, ಅಣ್ಣಲ್–ಸರ್ವೇಶ್ವರನ, ತಾಳ್–ಪಾದಗಳನ್ನು, ಅಣೈವಿಕ್ಕುಮ್–ಸೇರು ವಂತೆ ಮಾಡುವುವು.

( ಸ–ಗಾ–ರ || )—

ನೀಲಶ್ರೀಮಣಿವರ್ಣಮಚ್ಯುತಮಿಮಂ ಜ್ಯೋತಿಃ ಪರಂ ಸೂರಿಣಾಂ
ನಾಥಂ ಕೃಷ್ಣಮುದಾರಮೇವ ಕುರುಕಾನಾಥಶ್ಶಠಾರಿರ್ಮುನಿಃ |
ಪ್ರಾಪ್ತುಂ ಚಾಹ ಸಹಸ್ರಮುತ್ತಮಕೃತಿಂ ತತ್ರಾಪಿ ಚ ದ್ವಾದಶ–
ಶ್ರೀನಾಮಪ್ರತಿಪಾದಕಂ ತ್ವಿತ್ತ ತದಿದಂ ಪಾದೌ ಹರೇಃ ಪ್ರಾಪಯೇತ್ ||

ತಾ॥ ನೀಲಮಣಿವರ್ಣನಾಗಿಯೂ, ದಿವ್ಯತೇಜೋಮಯನಾಗಿಯೂ, ನಿತ್ಯಸೂರೀಶ್ವರನಾಗಿಯೂ ಇರುವ ಭಕ್ತವತ್ಸಲನಾದ ಶ್ರೀ ಕೃಷ್ಣನನ್ನು ಸ್ತೋತ್ರಮಾಡಲು, ಶ್ರೀ ಕುರುಕಾಪುರೀವಾಸ ರಸಿಕರಾದ ಶ್ರೀ ಶಠಾರಿಮುನಿವರ್ಯರು ರಚಿಸಿದ ಸಹಸ್ರ ದ್ರಾವಿಡಪದ್ಯಮಾಲೆಯೊಳು ಈ ಕೇಶವಾದಿ ದ್ವಾದಶನಾಮ ಸಂಕೀರ್ತನ ರೂಪವಾದ ಹನ್ನೆರಡು ಪದ್ಯಗಳು ಗಾನಮಾಡುವವರಿಗೆ ಆ ಸರ್ವೇಶ್ವರನ ಪಾದಾರವಿಂದ ಪ್ರಾಪ್ತಿಯನ್ನುಂಟುಮಾಡುವುವು—ಎಂದು ತಾತ್ಪರ್ಯ.

( ದ್ರ-ಉ-ಸಂ ॥ )—

ತೇ ಕೇಶವಾಭಿಮತತಾಮುಭಜನ್ತು ಹನ್ತ !
ಯೇ ಮಾಮಕಾ ಇತಿ ವದನ್ನಧಿಸಪ್ತಮಂ ಸಃ।
ತಸ್ಯ ಸ್ವರೂಪಗುಣಚೇಷ್ಟಿತವಾಚಿನಾಮ-
ಭೂತ-ದ್ವಿಷಟ್ಕಮುಖರೋ ಮುಮುದೇ ಮುನೀನ್ದ್ರಃ ।

( ದ್ರ-ಉ-ತಾ-ರ ॥ )—

ಸರ್ವಾದಿಸ್ಸರ್ವನಾಥಸ್ತ್ರಿಭುವನಜನನೀವಲ್ಲಭಸ್ಸಾಶ್ರಿತಾರ್ಥೀ
ವಿಷ್ವಗ್ವ್ಯಾಪ್ತ್ಯಾದಿದೀಪ್ತೋ ವಿಮತನಿರಸನಸ್ಸಾಂಘ್ರಿಸದ್ಭಕ್ತಿದಾಯೀ।
ವಿಶ್ವಾಪ್ತ್ಯೈ ವಾಮನಾಂಗಸ್ಸ್ವವಿಭವರಸದಸ್ಸ್ವಾನ್ತನಿರ್ವಾಹಯೋಗ್ಯ-
ಸ್ಸ್ವಾರ್ಥೀಹೋ ಬನ್ಧಮೋಕ್ತಾ ಸ್ವಜನಹಿತತಯಾ ದ್ವಾದಶಾಖ್ಯಾಭಿರೂಚೇ॥

(ಈ ಸಪ್ತಮದಶಕದ ಸಾರಾಂಶ.)

ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು, ತಮ್ಮ ಕುಲದವರೆಲ್ಲಾ ಶ್ರೀ ಭಗವತ್ಪ್ರಿಯತಮರಾದರೆಂದು ಸನ್ತುಷ್ಟರಾಗಿ, ತಮ್ಮ ಕೃತಜ್ಞತೆಯನ್ನು ಕೇಶವಾದಿ ದ್ವಾದಶನಾಮಸಂಕೀರ್ತನರೂಪದಿಂದ ಹನ್ನೆರಡುಪದ್ಯಗಳಲ್ಲಿ ವರ್ಣಿಸಿ ಫಲಶ್ರುತಿಯನ್ನೂ ಹದಿಮೂರನೆಯ ಪದ್ಯದಲ್ಲಿ ಸೂಚಿಸಿ ಇರುತ್ತಾರೆ.

---

ಶ್ರೀಃ

# ದ್ವಿತೀಯಶತಕದಲ್ಲಿ— ಅಷ್ಟಮದಶಕ.

## (ಅಣೈವದರವಣೈಮೇಲ್)

(ಈ ದಶಕದಲ್ಲಿ—ಶ್ರೀಭಗವಂತನು ಸಂಸಾರಿಚೇತನರ ವಿಷಯದಲ್ಲೂ ಕಾರುಣ್ಯ
ವುಳ್ಳವನಾಗಿ ಅವರ ಉಜ್ಜೀವನಕ್ಕಾಗಿ ತನ್ನ ಮೋಕ್ಷಪ್ರದತ್ವವನ್ನು
ಉಪದೇಶಿಸುತ್ತಾನೆಂದು—ಹೇಳಲ್ಪಡುತ್ತದೆ.)

---

(೧) ಅಣೈವದರವಣೈಮೇಲ್, ಪೂಮ್ ಪಾವೈಯಾಕಮ್
ಪುಣರ್ವದು, ಇರುವರವರ್ ಮುದಲುಮ್ ತಾನೇ,
ಇಣೈವನಾಮೆಪ್ಪೊರುಳ್ಕುಮ್ ವೀಡುಮುದಲಾಮ್,
ಪುಣೈವನ್ ಪಿಱವಿಕ್ಕಡಲ್ ನೀನ್ದುವಾರ್ಕ್ಕೇ.

ಪ್ರ || ಅರವು—ಆದಿಶೇಷರೂಪಿಯಾದ, ಅಣೈಮೇಲ್—ಶಯ್ಯೆಯಲ್ಲಿ (ಹಾಸಿಗೆಯಮೇಲೆ), ಅಣೈವದು—ಹೊಂದಿ ಸೇರಿರುವುದು; ಪೂಮ್‌ಪಾವೈ—ಪುಷ್ಪಪರಿಮಳ ಭೋಗ್ಯೆಯಾದ ಲಕ್ಷ್ಮೀದೇವಿಯು, ಆಕಮ್—ದಿವ್ಯಶರೀರವನ್ನು, ಪುಣರ್ವದು—ಭೋಗ್ಯವಾಗಿ ಸಂಶ್ಲೇಷಿಸುವುದು; (ಈ ನಿತ್ಯವಿಭೂತಿಕಾರ್ಯವೇ ಅಲ್ಲದೆ—ಲೀಲಾವಿಭೂತಿಯಲ್ಲೂ), ಅವರ್ ಇರುವರ್—ಬ್ರಹ್ಮರುದ್ರರೆಂಬ ಆ ಇರ್ಬ್ಬರಿಗೂ, ತಾನೇ—ಇವನೇ, ಮುದಲುಮ್—ಕಾರಣಭೂತನಾಗಿರುವನು; ಎಪ್ಪೊರುಳ್ಕುಮ್—ಸಮಸ್ತವಸ್ತುಗಳಿಗೂ, ಇಣೈವನಾಮ್—ಸಜಾತೀಯನಾಗಿರುವನು ; ವೀಡು—ಮೋಕ್ಷಕ್ಕೂ, ಮುದಲಾಮ್—ಹೇತುವಾಗಿರುವನು; ಪಿಱವಿ-ಸಂಸಾರವೆಂಬ, ಕಡಲ್—ಸಮುದ್ರವನ್ನು, ನೀನ್ದುವಾರ್ಕ್ಕು—ಈಜಿ ದಾಟಲಪೇಕ್ಷಿಸುವವರಿಗೆ, ಪುಣೈವನ್—ಹಡಗಿನಂತೆ ದಾಟಲು ಸಾಧನವಾಗಿರುವನು.

( ಸ—ಗಾ—ರ || )—

ಶೇಷೇ ಶಿಲಾಸ್ಯ ಶಯನಂ ಪ್ರಿಯಮಸ್ತಿ ವಿಷ್ಣೋ—
ರ್ಲಕ್ಷ್ಮೀತನೋರ್ಭವತಿ ಸಙ್ಗಮ ಏವ ಭೋಗ್ಯಃ |
ಮೂಲಂ ತಯೋರ್ವಿಧಿಶಿವಾತ್ಮಕಯೋಸ್ಸ ಸರ್ವೋ
ಮೋಕ್ಷಪ್ರದೋಽಸ್ತಿ ಚ ಭವಾರ್ಣವಪೋತರೂಪಃ ||

ತಾ|| ಆದಿಶೇಷರೂಪಿಯಾದ ಹಾಸಿಗೆಯಲ್ಲಿ ಸೇರಿ, ಲಕ್ಷ್ಮೀದೇವಿಯ ದಿವ್ಯ ಮಂಗಳವಿಗ್ರಹಸಂಶ್ಲೇಷವಂ ಪಡೆದು, ಬ್ರಹ್ಮರುದ್ರಾದಿಗಳಿಗೆಲ್ಲಾ ಕಾರಣಭೂತನಾಗಿ, ಸರ್ವವಸ್ತು ಸಜಾತೀಯನಾಗಿ, ಮೋಕ್ಷಪ್ರದನಾಗಿಯೂ ಸಂಸಾರಾರ್ಣವ ತಾರಕನಾಗಿಯೂ ಇರುವುದರಿಂದ ಇವನೇ ಸರ್ವೇಶ್ವರನೆಂದು ಸುವ್ಯಕ್ತವಾಗಿದೆಯೆಂದು ಭಾವವು.

(೨) ನೀನ್ದುಮ್ ತುಯರ್ಪ್ಪಿಱವಿಯುಳ್ ಪಡ ಮಱ್ಱೆವ್ವೈಯುಮ್
ನೀನ್ದುಮ್ ತುಯರಿಲ್ಲಾ ವೀಡುಮುದಲಾಮ್,
ಪೂನ್ತಣ್ ಪುನಲ್ ಪೊಯ್ಕೈಯಾನೈಯಿಡರ್ ಕಡಿನ್ದ,
ಪೂನ್ತಣ್ಣುೞಾಯೆನ್ ತನಿನಾಯಕರ್ ಪುಣರ್ಪ್ಪೇ.

ಪ್ರ|| ಪೂಮ್ ತಣ್ ಪುನಲ್ – ಪುಷ್ಪಗಳುಳ್ಳ, ಶೀತಳವಾದ ನೀರುಳ್ಳ, ಪೊಯ್‌ಕೈ–ತಟಾಕದಲ್ಲಿ, ಯಾನೈ–ಆನೆಯ, ಇಡರ್–ದುಃಖವನ್ನು, ಕಡಿನ್ದ–ನಾಶ ಮಾಡಿದ, ಪೂಮ್ ತಣ್ ತುೞಾಯ್–ರಮ್ಯವಾಗಿಯೂ ಶೀತಳವಾಗಿಯೂ ಇರುವ ತುಳಸೀಮಾಲೆಯುಳ್ಳ, ಎನ್ ತನಿನಾಯರ್ಕ–ನನ್ನ ಅದ್ವಿತೀಯನಾದ ನಾಯಕನ, ಪುಣರ್ಪ್ಪು – ಸಮ್ಬನ್ಧವು, ನೀನ್ದುಮ್–ದುಸ್ತರವಾದ (ದಾಟಲಶಕ್ಯವಾದ), ತುಯರ್–ದುಃಖಬಹುಳವಾದ, ಪಿಱವಿ ಉಳ್ಪಡ–ಸಂಸಾರಬನ್ಧವೇ ಮೊದಲಾಗಿ, ಮಱ್ಱು–ಅದಕ್ಕೆಮೇಲೆ, ನೀನ್ದುಮ್–ದುಸ್ತರವಾದ, ಎವ್ವೈಯುಮ್–ಸರ್ವವಿಧ (ಜರಾಮರಣಾದಿ) ದುಃಖಗಳೂ, ಇಲ್ಲಾ–ಇಲ್ಲದಿರುವ, ವೀಡು – ಮೋಕ್ಷಾನನ್ದಕ್ಕೆ, ಮುದಲಾಮ್–ಕಾರಣವಾಗಿಯೂ ಆಗುವುದು.

( ಸ–ಗಾ–ರ || )—

ಶೀತಹ್ರದೇಽಮ್ಬುಜಯುತೇ ಗಜದುಃಖಹನ್ತಾ
ಮನ್ನಾಯಕೋಽಸ್ತಿ ತುಲಸೀಶುಭಹಾರಭೂಷಃ |
ಸಙ್ಗೋಽಸ್ಯ ಸರ್ವಜಗತಾಂ ಭವದುಃಖಹನ್ತಾ
ಸರ್ವಾರ್ತಿಹೃದ್ಭವತಿ ಮೋಕ್ಷಸುಖಸ್ಯ ಮೂಲಮ್ ||

ತಾ|| ಮಹಾತಟಾಕದಲ್ಲಿ ಮೊಸಳೆಯಿಂದ ಹಿಡಿಯಲ್ಪಟ್ಟು ಅತ್ಯನ್ತ ದುಃಖಾಕ್ರಾನ್ತನಾಗಿದ್ದ ಗಜೇನ್ದ್ರನನ್ನು ರಕ್ಷಿಸಿದ ದಿವ್ಯ ತುಲಸೀಮಾಲಾಲಂಕೃತನಾದ ನನ್ನ ನಾಯಕನ ಸಂಬನ್ಧವು ಸಂಸಾರಾರ್ಣವತಾರಕನಾಗಿಯೂ, ಮೋಕ್ಷಾನನ್ದಸಾಧನವಾಗಿಯೂ ಇದೆಯೆಂದು ಭಾವವು.

(೩) ಪುಣರ್ಕ್ಕುಮಯನಾಮ್ಮೞಿಕ್ಕುಮರನಾಮ್,
ಪುಣರ್ತ್ತ ತನ್ನುನ್ದಿಯೋಡಾಕತ್ತು ಮನ್ನಿ,
ಪುಣರ್ತ್ತ ತಿರುವಾಕಿತ್ತನ್ಮಾರ್ವಿಲ್ ತಾನ್ಶೇರ್,
ಪುಣರ್ಪ್ಪನ್ ಪೆರುಮ್ ಪುಣರ್ ಪ್ಪೆಙ್ಗುಮ್ ಪುಲನೇ.

ಪ್ರ॥ ಶೇ ಪುಣರ್ತ್ತ-ತನ್ನನ್ನು ಉಂಟುಮಾಡಿದ (ಉದ್ಭವಿಸುವಂತೆ ಮಾಡಿದ), ಉನ್ದಿಯೋಡು—ನಾಭಿಯೊಡನೆ, ಆಕತ್ತು—(ಭಗವನ್ತನ) ಶರೀರದ ಒಂದು ಪಾರ್ಶ್ವ ದಲ್ಲಿ, ಮನ್ನಿ—ನಿತ್ಯವಾಸಮಾಡಿ, ಪುಣರ್ಕ್ಕುಮ್—ಲೋಕಸೃಷ್ಟಿಮಾಡುವ, ಅಯ ನಾಮ್—ಬ್ರಹ್ಮ (ಅಜ) ನಾಗಿಯೂ, ಅೞಿಕ್ಕುಮ್—ಸಂಹಾರಮಾಡುವ, ಅರನಾಮ್—ರುದ್ರ (ಹರ) ನಾಗಿಯೂ, (ಹೀಗೆ ತತ್ತದನ್ತರಾತ್ಮಕನಾಗಿದ್ದು) ಶೇಮಾರ್ವಿಲ್—ತನ್ನ ವಕ್ಷಸ್ಥಲದಲ್ಲಿ, ಪುಣರ್ತ್ತ—ಧರಿಸಲ್ಪಟ್ಟ, ತಿರು ಆಕಿ-ಲಕ್ಷ್ಮಿಯುಳ್ಳವನಾಗಿ, ತಾನ್ಶೇರ್—ತಾನೇ ತನಗೆ ತಕ್ಕ, ಪುಣರ್ಪ್ಪನ್—ಸ್ವಾಧೀನಚೇಷ್ಟಿತಗಳುಳ್ಳ ಆ ಭಗ ವನ್ತನ, ಪೆರುಮ್ ಪುಣರ್ಪ್ಪು—ಅಪಾರವಾದ ದಿವ್ಯವ್ಯಾಪಾರಗಳು, ಎಙ್ಗುಮ್—ಎಲ್ಲೆಲ್ಲೂ, ಪುಲನ್—ನೋಡಿ ಅನುಭವಿಸುವಂತೆ ಪ್ರಸಿದ್ಧವಾದುವು.

( ಸ-ಗಾ.ರ ॥ )—

ಸ್ವೋದ್ಭೂತನಾಭಿತಲಪಾರ್ಶ್ವನಿವಾಸಶೀಲೋ
ಧಾತಾಽಪಿ ಸೃಷ್ಟಿಕೃದಸೌ ಹಿ ಹರೋಽಪಿ ಹನ್ತಾ ।
ಯುಕ್ತಶ್ಶ್ರಿಯೋರಸಿ ನಿಜಾದ್ಭುತಶೀಲವೃತ್ತಿ-
ಸ್ಸರ್ವಾನ್ತರಾತ್ಮಕತಯಾ ಽಸ್ತ್ಯಭಿತಃ ಪ್ರಸಿದ್ಧಃ ॥

ತಾ॥ ನಾಭಿಸಂಭವನಾಗಿ ಸೃಷ್ಟಿಕರ್ತನಾದ ಬ್ರಹ್ಮನೂ, ಸಂಹಾರಕರ್ತನಾದ ರುದ್ರನೂ ತಾನೇ ಎಂಬಂತೆ ಅವರಿಗೆ ಅನ್ತರಾತ್ಮನಾಗಿದ್ದು, ವಕ್ಷಸ್ಥಲದಲ್ಲಿ ಲಕ್ಷ್ಮಿ ಯನ್ನು ಧರಿಸಿರುವ ಸ್ವಾಧೀನ ಸಕಲಚೇಷ್ಟಿತನಾದ ಭಗವನ್ತನ ಅತಿಮಾನುಷ ವ್ಯಾಪಾರಗಳು ಅಪಾರವಾಗಿಯೂ ಸರ್ವಲೋಕಪ್ರಸಿದ್ಧವಾಗಿಯೂ ಇವೆಯೆಂದು ಭಾವವು.

(೪) ಪುಲನ್ಕೈನ್ದು ಮೇಯುಮ್ ಪೊಱಿಯೈನ್ದುಂ ನೀಙ್ಗಿ,
ನಲನುನ್ದಮಿಲ್ಲದೋರ್ ನಾಡು ಪುಕುವೀರ್,
ಅಲಮನ್ದು ವೀಯವಶುರರೈ ಚ್ಚೆಯ್ದಾನ್,
ಪಲಮುನ್ದು ಶೀರಿಲ್ ಪಡಿಮಿನೋವಾದೇ.

ಪ್ರ॥ ಪುಲನ್-(ಪ್ರಕಾಶಿಸುವ) ವಿಷಯಗಳು, ಐನ್ದು-ಐದರಲ್ಲೂ, ಮೇಯುಮ್-ವ್ಯಾಪಿಸಿ ಇರುವ, ಪೊಱಿ ಐನ್ದು-ಐದು ಇನ್ದ್ರಿಯಗಳ ವಶದಿಂದಲೂ, ಅಕನ್ಱು-ದೂರಹೋಗಿ, ನಲಮ್-ಆನನ್ದವು, ಅನ್ದಮಿಲ್ಲದು-ಅಪರಿಚ್ಛಿನ್ನವಾಗಿರುವ, ಓರ್ ನಾಡು-ಅದ್ವಿತೀಯವಾದ (ಪರಮಪದವೆಂಬ) ದೇಶವನ್ನು, ಪುಕುವೀರ್-ಪ್ರವೇಶಿಸುವಿರಿ; ಅಲಮನ್ದ-ಸುತ್ತಿಸುತ್ತಿ, ವೀಯ-ನಾಶಹೊಂದುವಂತೆ, ಅಶುರರೈ-ರಾಕ್ಷಸರನ್ನು, ಶೆಱ್ಱಾನ್-ಕೊಂದವನ, ಮುನ್ದು ಪಲಮ್ – ಮುಂದೆ ಪ್ರಕಾಶಿಸುವ ಬಲರೂಪವಾದ, ಶೀರಿಲ್-ಕಲ್ಯಾಣಗುಣಗಳಲ್ಲಿ, ಓವಾದೇ-ಯಾವಾಗಲೂ (ವಿಚ್ಛೇದವಿಲ್ಲದಂತೆ), ಪಡಿಮಿನ್-ಮುಳುಗಿರಿ (ಮಗ್ನರಾಗಿ ಆನನ್ದಾನುಭವಮಾಡಿರಿ).

( ಸ-ಗಾ-ರ ॥ ) —

ಪಞ್ಚೇನ್ದ್ರಿಯೈರ್ವಿಷಯಪಞ್ಚಕಭುಕ್ತಿಸಕ್ತೈ
ರ್ಮುಕ್ತಾಃ ಪರಂಪದಮನನ್ತಸುಖಂ ವಿಶನ್ತಃ ।
ಯೂಯಂ ಭವೇತ ಸಕಲಾಸುರನಾಶಕಸ್ಯ
ಶ್ರೀಶಸ್ಯ ಸನ್ತತಬಲಾದಿಗುಣಾಬ್ಧಿಮಗ್ನಾಃ ॥

ತಾ॥ ಪಂಚವಿಷಯಗಳಲ್ಲೂ ವ್ಯಾಪಿಸಿ ಇರುವ ಪಂಚೇನ್ದ್ರಿಯಗಳನ್ನೂ ಬಿಟ್ಟು ದೂರಹೋಗಿ ಅಪರಿಚ್ಛಿನ್ನಾನನ್ದವುಳ್ಳ ಪರಮಪದವೆಂಬ ದಿವ್ಯಸ್ಥಾನವನ್ನು ನೀವು ಹೊಂದುವಿರಿ. ಸಕಲ ದುಷ್ಟರಾಕ್ಷಸಕುಲನಾಶಕನಾದ ಭಗವನ್ತನ ಬಲಾದಿ ಕಲ್ಯಾಣಗುಣಾರ್ಣವದಲ್ಲಿ ಮಗ್ನರಾಗಿರಿ. ( ಅವನ ಕಲ್ಯಾಣಗುಣಾನುಭವವಂ ಮಾಡಿದರೆ ನಿಮಗೆ ಪರಮಪದಪ್ರಾಪ್ತಿಯುಂಟಾಗುವುದೆಂದು ಉಪದೇಶಿಸುತ್ತಾರೆ.)

(೫) ಓವಾ ತ್ತುಯರ್ಪ್ಪಿಱವಿ ಯುಳ್ಪಡ ಮಱ್ಱೆವ್ವೆವೈಯುಮ್,
ಮೂವಾತ್ತನಿಮುದಲಾಯ್ ಮೂವುಲಕುಮ್ ಕಾವಲೋನ್
ಮಾವಾಕಿ ಯಾಮೈಯಾಯ್ ಮೀನಾಕಿ ಮಾನಿಡಮಾಮ್,
ತೇವಾದಿತೇವ ಪ್ಪೆರುಮಾನೆನ್ ತೀರ್ತ್ತನೇ

ಪ್ರ॥ ಓವಾ-ಅವಿಚ್ಛಿನ್ನವಾದ, ತುಯರ್-ದುಃಖವನ್ನು ಕೊಡುವ, ಪಿಱವಿ-ಜನ್ಮಸಮ್ಬನ್ಧವು (ಸೃಷ್ಟಿಯು), ಉಳ್ಪಡ-ಸೇರಿರುವಂತಹ, ಮಱ್ಱು ಎವ್ವೆವೈಯುಮ್-ಮಿಕ್ಕ (ಸ್ಥಿತಿಸಂಹಾರಾದಿ) ಎಲ್ಲಾ ವ್ಯಾಪಾರಗಳಿಗೂ, ಮೂವಾ-ಅಗ್ರೇಸರನಾಗಿರುವ, ತನಿಮುದಲಾಯ್-ಅದ್ವಿತೀಯಕಾರಣಭೂತನಾಗಿ, ಮೂವುಲಕುಮ್-ಮೂರುಲೋಕಗಳನ್ನೂ, ಕಾವಲೋನ್-ರಕ್ಷಿಸುವವನಾದ ಭಗವನ್ತನು, **ತೇವ ಆದಿ**

ಶೇವ-ದೇವತೆಗಳಿಗೂ ನಿತ್ಯಸೂರಿಗಳಿಗೂ, ಪೆರುಮಾ-ಅಧಿಪತಿಯಾಗಿ, ಎ-ನನಗೆ, ತೀರ್‌ತ್ತ-ಪಾವನವಾದ ತೀರ್ಥದಂತೆ ಇರುವವನಾಗಿ (ಅವಗಾಹಸ್ನಾನಕ್ಕೆ ಸುಲಭನಾಗಿ), ಮಾವಾಕಿ - (ವೇದಪ್ರವರ್ತಕನಾದ) ಹಯಗ್ರೀವನಾಗಿ, ಆಮೈಯಾಯ್ ಮೀನಾಕಿ - (ಪುರಾಣಪ್ರವರ್ತಕನಾದ) ಕೂರ್ಮ-ಮತ್ಸ್ಯರೂಪಿಯಾಗಿ, ಮಾನಿಡಮಾಮ್ - (ಗೀತಾಚಾರ್ಯನಾದ) ಮಾನುಷರೂಪಿಯಾಗಿಯೂ ಆಗುವನು.

( ಸ-ಗಾ-ರ || )—

**ನಾನಾರ್ತಿಸನ್ತತಿಕರೀಮಪಿ ಸೃಷ್ಟಿಮೇತಾಂ**
**ರಕ್ಷಾಂ ಚ ಸಂಹೃತಿಮನಾದಿರಯಂ ಹಿ ಕುರ್ವನ್ |**
**ದೇವಾಧಿದೇವ ಇಹ ಮೇಽಸ್ತಿ ಚ ತೀರ್ಥರೂಪೋ**
**ವಾಜೀ ಚ ಮತ್ಸ್ಯಕಮಠಾದಿರಹೋ ! ನರಾತ್ಮಾ ||**

ತಾ|| ಸನ್ತತದುಃಖಮೂಲವಾದ ಜನ್ಮಪರಂಪರಾತ್ಮಕ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆಲ್ಲಾ ಮೂಲಕಾರಣಭೂತನಾಗಿ ಸರ್ವಲೋಕರಕ್ಷಕನಾಗಿರುವ ಭಗವನ್ತನು ಸರ್ವದೇವಾಧಿದೇವನಾಗಿಯೂ ನಿತ್ಯಸೂರೀಶ್ವರನಾಗಿಯೂ ನನಗೆ ಪಾವನನಾಗಿ ತೀರ್ಥರೂಪನಾಗಿಯೂ, ಹಯಗ್ರೀವ-ಮತ್ಸ್ಯ-ಕೂರ್ಮಾದಿರೂಪನಾಗಿಯೂ, (ಗೀತಾಚಾರ್ಯನಾಗಿ) ಮಾನುಷರೂಪಿಯಾಗಿಯೂ ಆಗುವನು. (ಇಂತಹ ಭಗವನ್ತನೇ ಸರ್ವೇಶ್ವರನೆಂದು ಭಾವವು.)

(೬) ತೀರ್‌ತ್ತನುಲಕಳನ್ದ, ಶೇವಡಿಮೇಲ್ ಪೂನ್ದಾಮಮ್
ಶೇರ್‌ತ್ತಿಯವೈಯೇ ಶಿವನ್ ಮುಡಿಮೇಲ್ ತಾನ್‌ಕಣ್ಡು,
ಪಾರ್‌ತ್ತನ್ ತೆಳಿನ್ದೊಳಿನ್ದ ಪೈನ್ದುಳಾಯಾನ್ ಪೆರುಮೈ,
ಪೇರ್‌ತ್ತುಮೊರುವರಾಲ್ ಪೇಶಕ್ಕಿಡನ್ದದೇ.

ಪ್ರ|| ತೀರ್‌ತ್ತನ್-ಪಾವನನಾದ ಶ್ರೀಕೃಷ್ಣನ, ಉಲಕು ಅಳನ್ದ-(ಪೂರ್ವಾವತಾರದಲ್ಲಿ) ಲೋಕಗಳನ್ನು ಅಳೆದುಕೊಂಡ, ಶೇವಡಿಮೇಲ್-ಭೋಗ್ಯವಾದ ಪಾದಗಳಮೇಲೆ, ಪೂನ್ ತಾಮಮ್ - ರಮಣೀಯವಾದ ಮಾಲೆಗಳನ್ನು, ಶೇರ್‌ತ್ತಿ-ಸಮರ್ಪಿಸಿ, ಅವೈಯೇ-ಅವುಗಳನ್ನೇ, ಶಿವನ್-ಶಿವನ, ಮುಡಿಮೇಲ್ - ಶಿರಸ್ಸಿನಮೇಲೆ, ತಾನ್-ತಾನೇ, ಕಣ್ಡು-ನೋಡಿ, ಪಾರ್‌ತ್ತನ್-ಅರ್ಜುನನು, ತೆಳಿನ್ದು ಒಳಿನ್ದ-ಚೆನ್ನಾಗಿ ತಿಳಿದುಕೊಂಡ, ಪೈಮ್ ತುಳಾಯಾನ್-ಹಚ್ಚಗೆ ಇರುವ ತುಳಸೀಮಾಲೆಯನ್ನು ಧರಿಸಿರುವವನ ( ಸರ್ವೇಶ್ವರನಾದ ಭಗವನ್ತನ ), ಪೆರುಮೈ-

ಪರತ್ವವು, ಪೇರ್ತ್ತುಮ್ ಒರುವರಾಲ್—ಪುನಃ ಬೇರೆ ಯಾರಿಂದಲಾದರೂ, ಪೇಶ್—ವರ್ಣಿಸಲ್ಪಡುವಂತೆ, ಕಿಡನ್ದದೇ – ಅವಶಿಷ್ಟವಾಗಿ ಏನಾದರೂ ನಿಂತಿತ್ತೋ ? (ಅರ್ಜುನನಿಂದಲೇ ಸರ್ವಮಾಹಾತ್ಮ್ಯವೂ ನಿರ್ಣೀತವಾಯಿತೆಂದು ಭಾವವು.)

( ಸ-ಗಾ-ರ ॥ )—

ಶೀರ್ಷಸ್ಯ ಯಸ್ಯ ಪದಯೋಃ ಕುಸುಮಾವಳೀಂ ತಾಂ
ಭಕ್ತ್ಯಾ ಸಮರ್ಪ್ಯ ಶಿವಮಸ್ತಕ ಏವ ದೃಷ್ಟ್ವಾ ।
ಪಾರ್ಥೇನ ತೇನ ವಿದಿತಂ ಪ್ರಥಿತಂ ಪರತ್ವಂ
ತಸ್ಯಾದ್ಯ ಕಿಂ ಬತ! ಪೃಥಕ್ಪ್ರತಿಪಾದ್ಯಮೇವ ? ॥

ತಾ॥ ಪಾವನನಾದ ಶ್ರೀಕೃಷ್ಣನು ತನ್ನ ವಾಮನಾವತಾರದಲ್ಲಿ ಲೋಕಗಳನ್ನೆಲ್ಲಾ ಅಳೆದುಕೊಂಡ ಪಾದಗಳಮೇಲೆ ಅರ್ಜುನನು ರಮಣೀಯವಾದ ಪುಷ್ಪಮಾಲಿಗಳನ್ನು ಇಡಲು, ಆ ಮಾಲಿಗಳು ಶಿವನ ಜಟಾಮಕುಟದಮೇಲೆ ಪ್ರಕಾಶಿಸಿದುವು. ಆಗ ಅರ್ಜುನನಿಗೆ ಶ್ರೀಕೃಷ್ಣನ ಸರ್ವಸ್ಮಾತ್ಪರತ್ವವು ಚೆನ್ನಾಗಿ ವ್ಯಕ್ತವಾಯಿತು. (ಇದಕ್ಕಿಂತ ಬೇರೆ ಪರತ್ವನಿರೂಪಣವು ಬೇಕಾದುದಿಲ್ಲವಷ್ಟೆ— ಎಂದು ಭಾವವು.)

(೭) ಕಿಡನ್ದಿರುನ್ದು ನಿನ್ಱಳನ್ದು, ಕೇೞಲಾಯ್ ಕ್ಕೀೞ್ ಪು-
ಕ್ಕಿಡನ್ದಿಡುಮ್', ತನ್ನುಳ್ ಕರಕ್ಕುಮುಮಿೞುಮ್,
ತಡಮ್ ಪೆರುನ್ದೋಳಾರತ್ತೞುವುಮ್, ಪಾರೆನ್ನುಮ್
ಮಡನ್ದೈಯೈ, ಮಾಲ್ ಶೆಯ್‌ದಿನ್ಱಮಾಲಾರ್ ಕಾಣ್ಬಾರೇ.

ಪ್ರ॥ ಕಿಡನ್ದು – ಸಮುದ್ರತೀರದಲ್ಲಿ (ಧಾರಿಗೋಸ್ಕರ) ದರ್ಭಶಯನದಲ್ಲಿ ಮಲಗಿಯೂ, ಇರುನ್ದು—ಚಿತ್ರಕೂಟದಲ್ಲಿ ಇದ್ದು ವಾಸಮಾಡುತ್ತಲೂ, ನಿನ್ಱು—ರಾವಣವಧಾನನ್ತರ ದೇವತಾ ಸಾನ್ನಿಧ್ಯದಲ್ಲಿ ಬಿಲ್ಲನ್ನು ಹಿಡಿದುಕೊಂಡು ನಿಂತೂ (ಅಥವಾ-ಅರ್ಚಾವತಾರದಲ್ಲಿ ಶಯನಮಾಡಿಯೂ, ಕುಳಿತೂ, ನಿಂತೂ), ಅಳನ್ದು—ತ್ರಿವಿಕ್ರಮನಾಗಿ ಲೋಕಗಳನ್ನು ಅಳೆದೂ, ಕೇೞಲಾಯ್—ವರಾಹರೂಪಿಯಾಗಿ, ಕೀೞ್—ಪ್ರಳಯ ಮಹಾಜಲದ ಕೆಳಗೆ, ಪುಕ್ಕು—ಪ್ರವೇಶಿಸಿ, ಇಡನ್ದಿಡುಮ್—ಭೂಮಿಯನ್ನು ಕಿತ್ತು ಎತ್ತಿಯೂ, ತನ್ನುಳ್—ತನ್ನ ಉದರದಲ್ಲಿ, ಕರಕ್ಕುಮ್—ಮರೆಸಿ ಇಟ್ಟುಕೊಂಡೂ, ಉಮಿೞುಮ್—ಉಗಿದೂ (ಪುನಃ ಆವಿರ್ಭವಿಸುವಂತೆ ಮಾಡಿಯೂ), ತಡಮ್—ವಿಶಾಲವಾದ

ಪೆರುಮ್ ತೋೞ್–ಮಹಾಭುಜಗಳು, ಆರ–ತುಂಬುವಂತೆ, ತೞುವುಮ್–ಆಲಿಂಗನ ಮಾಡಿಯೂ, (ಈಪ್ರಕಾರ) ಪಾರೆನ್ನುಮ್–ಭೂಮಿಯೆಂಬ, ಮಡನ್ದೈಯೈ–ದೇವಿಯನ್ನು, ಮಾಲ್–ಈಶ್ವರನು, ಶೆಯ್‌ಕಿನ್ಱ – ಮಾಡುವ, ಮಾಲ್–ಮೋಹನಕೃತ್ಯವನ್ನು, ಕಾಣ್ಬಾರ್–ತಿಳಿಯಬಲ್ಲವರು, ಆರ್–ಯಾರು ?

( ಸ–ಗಾ–ರ ॥ )—

ಶಯ್ಯಾಂ ಗತೋಽಪ್ಯುಪವಿಶನ್ನಪಿ ಚಾಕ್ರ ತಿಷ್ಠನ್
ಪಾದೇನ ಚಾಕ್ರಮಣತೋಽಪಿ ವರಾಹವೇಷಾತ್ ।
ಉದ್ಧೃತ್ಯ ಚಾಪಿ ಜಠರೇ ಪೃಥಿವೀಂ ದಧಾನೋ
ಽಪ್ಯಾಶ್ಲಿಷ್ಯ ಬಾಹುಭಿರಸೌ ಬಹುಧಾಽಸ್ತಿ ಮುಗ್ಧಃ ॥

ತಾ॥ ಮಲಗಿಯೂ, ಕುಳಿತೂ, ನಿಂತೂ, ಕಾಲಿನಿಂದ ಅಳೆದೂ, ವರಾಹರೂಪದಿಂದ ಮೇಲಕ್ಕೆ ಎತ್ತಿಯೂ, ಉದರದಲ್ಲಿಟ್ಟು ಧರಿಸಿಯೂ, ಪುನಃ ಆವಿರ್ಭವಿಸುವಂತೆ ಮಾಡಿಯೂ, ಬಾಹುಗಳಿಂದ ಆಲಿಂಗನ ಮಾಡಿಯೂ (ಈಪ್ರಕಾರ) ಭೂದೇವಿಯನ್ನು ನಾನಾವಿಧವಾಗಿ ಮೋಹಪಡಿಸಿ ವಶೀಕರಿಸುವ ಸರ್ವೇಶ್ವರನ ಮಹಿಮೆಯನ್ನು ಯಾರುತಾನೇ ತಿಳಿಯಬಲ್ಲರು ?

(೮) ಕಾಣ್ಬಾರಾರೆಮ್ಮೀಶನ್ ಕಣ್ಣನೈಯೆನ್ ಕಾಣುಮಾಱು,
ಊಣ್ ಪೇಶಿಲೆಲ್ಲಾವುಲಕುಮೋರ್ ತುಱ್ಱಾಱ್ಱಾ,
ಶೇಣ್‌ಪಾಲ ವೀಡೋ ಉಯಿರೋ ಮಱ್ಱೆಪ್ಪೊರುಳ್ಕ್ಕುಮ್,
ಏಣ್‌ಪಾಲುಮ್ ಶೋರಾನ್ ಪರನ್ದುಳನಾಮೆಙ್ಗುಮೇ.

ಪ್ರ॥ ಎಮ್–ನಮ್ಮ, ಈಶನ್–ಸ್ವಾಮಿಯಾದ, ಕಣ್ಣನೈ – ಶ್ರೀಕೃಷ್ಣನನ್ನು, ಕಾಣ್‌ಬಾರ್ – ಕಾಣಬಲ್ಲವರು, ಆರ್–ಯಾರು ? ಕಾಣುಮ್ ಆಱು–ಕಾಣುವ ಪ್ರಕಾರವು, ಏನ್–ಯಾವುದು ? (ಅವನಿಗೆ) ಊಣ್ – ಊಟವು, ಪೇಶಿಲ್–ಹೇಳಬೇಕಾದರೆ, ಎಲ್ಲಾ ಉಲಕುಮ್ – ಸಕಲಲೋಕಗಳೂ, ಓರ್ ತುಱ್ಱು–ಒಂದು ಕವಳಕ್ಕೂ, ಆಱ್ಱಾ–ಸಾಲದು; ವೀಡೋ–ಅವನು ವಾಸಮಾಡುವ ಸ್ಥಲವೋ, ಶೇಣ್‌ಪಾಲ–ಪರಮಪದದಲ್ಲಿರುವುದು; ಅವನೋ–ಅವನೋ, ಮಱ್ಱು–(ತನ್ನನ್ನು ಬಿಟ್ಟು) ಮಿಕ್ಕ, ಎಪ್ಪೊರುಳ್ಕ್ಕುಮ್–ಎಲ್ಲಾ ವಸ್ತುಗಳಿಗೂ, ಉಯಿರ್–ಅನ್ತರ್ಯಾಮಿ; ಏಣ್‌ಪಾಲುಮ್–ರೇಖಾಮಾತ್ರವೂ, ಶೋರಾನ್–ಬಿಡದವನಾಗಿ, ಎಙ್ಗುಮ್–ಎಲ್ಲಾ ಪ್ರದೇಶಗಳಲ್ಲೂ, ಪರನ್ದು–ವ್ಯಾಪಿಸಿ, ಉಳನಾಮ್–ಇರುವವನಾಗಿದಾನೆ.

( ಸ-ಗಾ-ರ || )—

ಕೋ ವೇತ್ತಿ ಮೇ ಪ್ರಭುಮಿಮಂ ನನು ಕಥಂ ನು ವೇತ್ತಿ
ಶ್ರೀಕೃಷ್ಣಮಸ್ಯ ಸಕಲಂ ಕಬಳಂ ಜಗತ್ ಸ್ಯಾತ್ |
ಸ್ಥಾನಂ ಪರಂ ಪದಮಸೌ ಸಕಲಾನ್ತರಾತ್ಮಾ
ವ್ಯಾಪ್ನೋತಿ ಸರ್ವಮಪಿ ಲೇಶಮಪಿ ತ್ಯಮುಜ್ಝನ್ ||

ತಾ|| ನಮ್ಮ ಸ್ವಾಮಿಯಾದ ಶ್ರೀಕೃಷ್ಣನನ್ನು ಕಾಣುವವರು ಯಾರು ? ಕಾಣುವ ಪ್ರಕಾರವು ಯಾವುದು ? ಸರ್ವಲೋಕಗಳೂ ಸೇರಿದರೂ ಅವನ ಒಂದು ಕವಳಕ್ಕೆ ಸಾಲದು. ಈರೀತಿ ಅವನ ಊಟದಕ್ರಮ. ಅವನ ವಾಸಸ್ಥಲವೋ ಸಾಕ್ಷಾತ್ಪರಮಪದದಲ್ಲಿ. ಅವನೋ ಸಕಲವಸ್ತುಗಳಿಗೂ ಅನ್ತರಾತ್ಮನಾಗಿದಾನೆ; ಮತ್ತು ಕೊಂಚವೂ ಎಡೆಬಿಡದೆ ಸರ್ವತ್ರ ವ್ಯಾಪಿಸಿ ಇದಾನೆ. (ಅವನ ಮಹಿಮೆಯು ಈಪ್ರಕಾರ ಅಪಾರವಾದುದರಿಂದ ಯಾರೂ ಅವನನ್ನು ವಸ್ತುತಃ ತಿಳಿಯಲಾರ ರೆಂದು ಭಾವವು.)

(೯) ಎಙ್ಗುಮುಳನ್ ಕಣ್ಣನೆನ್ಱ ಮಕನೈ ಕ್ಕಾಯ್ನ್ದು,
ಇಙ್ಗಿಲ್ಲೈಯಾಲೆನ್ಱಿರಣಿಯನ್ ತೂಣ್ ಪುಡೈಪ್ಪ,
ಅಙ್ಗಪ್ಪೊೞುದೇ ಯವನ್ ವೀಯ ತ್ತೋನ್ಱಿಯ, ಎನ್
ಶಿಙ್ಗಪ್ಪಿರಾನ್ ಪೆರುಮೈ ಯಾರಾಯುಮ್ ಶೀರ್ಮೈತ್ತೇ.

ಪ್ರ|| ಕಣ್ಣನ್-ಸರ್ವೇಶ್ವರನು, ಎಙ್ಗುಮ್-ಎಲ್ಲೆಲ್ಲಿಯೂ, ಉಳನ್-ಇರುವವನು, ಎನ್ಱ-ಎಂದು ಹೇಳಿದ, ಮಕನೈ-ಮಗನನ್ನು (ಪ್ರಹ್ಲಾದನನ್ನು), ಕಾಯ್ನ್ದು-ಕೋಪದಿಂದ ಧಿಕ್ಕರಿಸಿ, ಇಙ್ಗು-ಇಲ್ಲಿ, ಇಲ್ಲೈಯಾಲ್-ಇಲ್ಲವೇ ಇಲ್ಲ, ಎನ್ಱು-ಎಂದು ತೂಣ್-ಸ್ತಂಭವನ್ನು, ಇರಣಿಯನ್-ಹಿರಣ್ಯಕಶಿಪುವು, ಪುಡೈಪ್ಪ - ಒದೆಯಲು, ಅಙ್ಗು-ಆ ಸ್ತಂಭದಲ್ಲಿ, ಅಪ್ಪೊೞುದೇ - ಆಕ್ಷಣದಲ್ಲೇ, ಅವನ್-ಆ ಹಿರಣ್ಯನು, ವೀಯ-ನಾಶಹೊಂದುವಂತೆ, ತೋನ್ಱಿಯ-ಅವತರಿಸಿದ, ಎನ್-ನನ್ನ, ಶಿಙ್ಗಪ್ಪಿರಾನ್-ನರಸಿಂಹಸ್ವಾಮಿಯ, ಪೆರುಮೈ-ಮಾಹಾತ್ಮ್ಯವು, ಆರಾಯುಮ್ - ಇಂತಹುದೆಂದು ನಿರ್ಣಯಿಸಲು, ಶೀರ್ಮೈತ್ತೇ-ಸಾಧ್ಯವಾದ ಸ್ವಭಾವವುಳ್ಳದುದೋ ?

( ಸ-ಗಾ-ಠ ‖ )—

ಸರ್ವತ್ರ ಸನ್ನಿಹಿತ ಏವ ಹರಿಃ ಕಿಲೇತಿ
ಪ್ರಾಪ್ತೇ ಸುತೇಽಪಿ ಚ ರುಷಾ ಸ ಹಿರಣ್ಯನಾಮಾ ।
ಸ್ತಮ್ಭೇ ನ ಹೀತ್ಯವದದಸ್ಯ ವಧಾಯ ತಸ್ಮಾ-
ದ್ಭೂತಂ ನೃಸಿಂಹಮಸಮಂ ಬತ! ವೇತ್ತಿ ಕೋ ವಾ ? ‖

ತಾ‖ "ಸರ್ವೇಶ್ವರನು ಎಲ್ಲೆಲ್ಲಿಯೂ ಇರುವನು"—ಎಂದು ಹೇಳಿದ ತನ್ನ ಮಗನಾದ ಪ್ರಹ್ಲಾದನ ವಿಷಯದಲ್ಲಿ ಹಿರಣ್ಯಕಶಿಪುವು ಅತ್ಯಂತ ಕೋಪಾಕ್ರಾಂತನಾಗಿ (ಅವನನ್ನು ನಾನಾವಿಧವಾಗಿ ದಂಡಿಸಿ) ಒಂದು ಸ್ತಂಭವನ್ನು ತೋರಿಸಿ "ಇದರೊಳು ಎಲ್ಲಿದ್ದಾನೆ? ಇಲ್ಲವೇ ಇಲ್ಲ"—ಎಂದು ತನ್ನ ಕಾಲಿಂದ ಒದೆಯಲು, ಆ ಕ್ಷಣದಲ್ಲಿಯೇ ಆ ಸ್ತಂಭದಿಂದ ಅವತರಿಸಿ ಅವನನ್ನು ಧ್ವಂಸಮಾಡಿದ ನಮ್ಮ ನರಸಿಂಹಸ್ವಾಮಿಯ ಮಹಿಮೆಯು ಇಂತಹುದೆಂದು ನಿರ್ಣಯಿಸಲು ಯಾರಿಗೆತಾನೆ ಸಾಧ್ಯವಾದೀತು? (ಇದು ಅಪರಿಚ್ಛಿನ್ನವಾದುದರಿಂದ ಯಾರಿಗೂ ನಿರ್ಣಯಿಸಲು ಸಾಧ್ಯವಲ್ಲವೆಂದು ಭಾವವು.)

(೧೦) ಶೀರ್ವೈ ಕೊಳ್ ವೀಡು, ಶುವರ್ಕ್ಕ ನರಕೀಱಾ,
ಈರ್ವೈ ಕೊಳ್ ತೇವರ್ ನಡುವಾ ಮಱ್ಱೆಪ್ಪೊರುಳ್ಕ್ಕುಮ್,
ವೇರ್ಮುದಲಾಯ್ ವಿತ್ತಾಯ್ ಪ್ಪರನ್ದು ತನಿ ನಿನ್ಱ,
ಕಾರ ಮುಕಿಲ ಪೋಲ್ ವಣ್ಣನೆಕ್ಕಣ್ಣನೈ ನಾನ್ ಕಣ್ಡೇನೇ.

ಪ್ರ‖ ಶೀರ್ವೈಕೊಳ್ – ಮಹಾಮಹಿಮೆಯುಳ್ಳ, ವೀಡು – ಮೋಕ್ಷವೂ, ಶುವರ್ಕ್ಕನರಕು – ಸ್ವರ್ಗನರಕಗಳೂ, ಈಱು ಆ – ಮೇಲಿನ ಎಲ್ಲೆಯವರಾದ, ಈರ್ವೈಕೊಳ್ – ಫಲಪ್ರದರೆಂದು ಪ್ರಸಿದ್ಧರಾಗಿ ವೀರಶ್ರೀಯುಳ್ಳ, ತೇವರ್ – ದೇವತೆಗಳೂ, ನಡುವಾ– ಸಾಧನಗಳಿಗೂ ಫಲಗಳಿಗೂ ನಡುವೆ, ಮಱ್ಱು ಎಪ್ಪೊರುಳ್ಕ್ಕುಮ್–ಮಿಕ್ಕ ಎಲ್ಲಾ ವಸ್ತುಗಳಿಗೂ, ವೇರ್ಮುದಲಾಯ್ – ಆದಿ (ಸಹಕಾರಿ–ನಿಮಿತ್ತ) ಕಾರಣವಾಗಿ, ವಿತ್ತಾಯ್–ಉಪಾದಾನ ಕಾರಣವಾಗಿಯೂ, ಪರನ್ದು–ಸರ್ವತ್ರವ್ಯಾಪಿಸಿ, ತನಿನಿನ್ಱ–ಬೇರೆಯಾಗಿಯೂ ನಿಂತ, ಕಾರ್ಮುಕಿಲ್ ಪೋಲ್ ವಣ್ಣನ್ – ನೀಲಮೇಘದಂತೆ ವರ್ಣವುಳ್ಳ, ಎನ್ಕಣ್ಣನೈ–ನನ್ನ ಶ್ರೀಕೃಷ್ಣನನ್ನು, ನಾನ್–ನಾನು, ಕಣ್ಡೇನೇ–ಕಣ್ಡೇ ಅನುಭವಿಸುತ್ತಿದೇನಲ್ಲವೇ !

( ಸ-ಗಾ-ರ ॥ )—

ಮೋಕ್ಷಪ್ರದಸ್ಸುರನಾರಕಿಣಾಂ ಚ ಸರ್ವೇ
ದೇವಾದ್ಯಶೇಷಜಗತಾಮಪಿ ಧಾರಕೋಽಸೌ ।
ಯನ್ತಾ ಚ ಬೀಜಮಖಿಲೋ ವಿಭುರಬ್ಜವರ್ಣಃ
ಕೃಷ್ಣೋ ಮಯಾಸ್ತಿ ಕಿಲ ಲೋಚನಗೋಚರೋಽದ್ಯ ॥

ತಾ॥ ಶ್ರೀ ಭಗವನ್ತನೇ ಮಹಾಮಹಿಮೆಯುಳ್ಳ ಮೋಕ್ಷವೂ, ಸ್ವರ್ಗನರಕಗಳೂ, ಎಂಬೀಸ್ಥಾನಗಳಿಗೆಲ್ಲಾ ಧಾರಕನಾಗಿ, ದೇವತೆಗಳಿಗೂ ಸಕಲ ವಸ್ತುಗಳಿಗೂ ಸಹಕಾರಿ – ನಿಮಿತ್ತೋಪಾದಾನಾದಿ ಸರ್ವಕಾರಣ ಭೂತನಾಗಿಯೂ, ಸರ್ವತ್ರವ್ಯಾಪಿಸಿದ್ದಾಗ್ಯೂ ಪೃಥಕ್ ಸ್ಥಿತಿಯುಳ್ಳವನಾಗಿಯೂ ಇದ್ದಾನೆ. ಇಂತಹ ನೀಲಮೇಘಶ್ಯಾಮನಾದ ಶ್ರೀಕೃಷ್ಣನನ್ನು ನಾನು ಕಂಡು ಅನವರತ ಅನುಭವಿಸುತ್ತಿದೇನಷ್ಟೆ—ಎಂದು ಹೃಷ್ಟರಾಗಿದ್ದಾರೆ.

(೧೧) ಕಣ್ಣಲಙ್ಗಳ್ ಶೆಯ್ಯ ಕರುಮೇನಿ ಯಮ್ಮಾನ್ನೈ.
ವಣ್ಣಲಮ್ಬುಮ್ ಶೋಲೈ ವೞುದಿವಳನಾಡರ್,
ವಣ್ಣಲೈಯಿಲ್ ಶೊನ್ನ ತಮಿೞಾಯಿರತ್ತಿಪ್ಪತ್ತುಮ್ ವಲ್ಲಾರ್,
ವಿಣ್ಣಲೈಯಿಲ್ ವೀಱ್ಱಿರುನ್ದಾಳ್ವರೆಮ್ಮಾವೀಡೇ.

ಪ್ರ॥ ಕಣ್–ಕಣ್ಣಿನಲ್ಲಿ, ತಲಙ್ಗಳ್ – ಸ್ಥಲಗಳಲ್ಲೆಲ್ಲಾ, ಶೆಯ್ಯ–ಕೆಂಪಾಗಿ, ಕರುಮೇನಿ–ನೀಲವಾದ ದಿವ್ಯಶರೀರವುಳ್ಳ, ಅಮ್ಮಾನ್ನೈ–ಸ್ವಾಮಿಯನ್ನು ಸ್ತೋತ್ರ ಮಾಡುವುದಕ್ಕಾಗಿ, ವಣ್ಡು ಅಲಮ್ಬುಮ್ – ಭ್ರಮರಗಳು ಶಬ್ದಮಾಡುತ್ತಿರುವ, ಶೋಲೈ–ವೃಕ್ಷಗಳುಳ್ಳ, ವಳಮ್–ರಮ್ಯವಾದ, ವೞುದಿನಾಡರ್–ತಿರುವೞುದಿನಾಡಿಗೆ ನಿರ್ವಾಹಕರಾದ ನಮ್ಮಾೞ್ವಾರು, ವಣ್ತಲೈಯಿಲ್ ಶೊನ್ನ–ಶ್ರೇಷ್ಠವಾದ ಗಾನದೊಡನೆ ಹೇಳಿದ, ತಮಿೞ್ ಆಯಿರತ್ತು–ದ್ರಾವಿಡ ಸಹಸ್ರಪದ್ಯಮಾಲೆಯೊಳು, ಇಪ್ಪತ್ತು–ಈ ಹತ್ತು ಪದ್ಯಗಳನ್ನು, ವಲ್ಲಾರ್–ಅಭ್ಯಸಿಸಿ ಗಾನಮಾಡುವವರು, ವಿಣ್ತಲೈಯಿಲ್ – ಪರಮಪದದಲ್ಲಿ, ವೀಱ್ಱಿರುನ್ದು ವಾಸಮಾಡುತ್ತ, ಎಮಾ ವೀಡು–ಸರ್ವವಿಧಮಹಿಮೆಯುಳ್ಳ ಮೋಕ್ಷಸಾಮ್ರಾಜ್ಯವನ್ನು, ಆಳ್ವರೇ–ಪಡೆದು ಆಳುವರಷ್ಟೆ.

( ಸ-ಗಾ-ರ || )—

ಶ್ರೀಪುಣ್ಡರೀಕನಯನಂ ಪ್ರಭುಮಬ್ದವರ್ಣಂ
ಸ್ತೋತುಂ ಶಠಾರಿರವದತ್ಕುರುಕಾಪುರೀಶಃ |
ಸಾಹಸ್ರಮುತ್ತಮಮಿದಂ ದಶಕಂ ಚ ತತ್ರ
ಜ್ಞಾತ್ವಾ ಭಜನ್ತಿ ಪರಮೇ ಚ ಪದೇ ಸ್ವರಾಜ್ಯಮ್ ||

ತಾ|| ಕೆಂದಾವರೆಯಂತೆ ಕಣ್ಣುಗಳುಳ್ಳ ನೀಲಮೇಘಶ್ಯಾಮನಾದ ನಮ್ಮ ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕಾಗಿ, ತಿರುವ್ಗುದಿನಾಡಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು ರಚಿಸಿದ ಸಹಸ್ರಪದ್ಯಮಾಲಾತ್ಮಕ ದ್ರಾವಿಡ ದಿವ್ಯ ಪ್ರಬನ್ಧದೊಳು ಈ ದಶಕವನ್ನು ಅಭ್ಯಸಿಸಿ ಪಠನಮಾಡುವವರು ಪರಮಪದದಲ್ಲಿ ನಿತ್ಯವಾಸಮಾಡುತ್ತ ಮೋಕ್ಷಸಾಮ್ರಾಜ್ಯ ಧುರನ್ಧರರಾಗುವರು.

( ದ್ರ-ಉ-ಸಂ || )—

ಆತ್ಮಾನ್ವಯಿಷ್ವಪಿ ಹರೇಃ ಪ್ರಿಯತಾಮವೇಕ್ಷ್ಯ
ಸರ್ವಾತ್ಮನಸ್ಸ್ವಜನಯನ್ ಮುನಿರಷ್ಟಮೇನ |
ಮೋಕ್ಷಪ್ರದತ್ವಮುಪದಿಶ್ಯ ತದಾಭಿಮುಖ್ಯಾ-
ಲಾಭಾತ್ ಸ್ವಲಾಭಮಧಿಕಂ ಬಹುಮನ್ಯತೇ ಸ್ಮ ||

( ದ್ರ-ಉ-ತಾ-ರ || )—

ಪ್ರಾಪ್ಯಾಕಾರೋಪಪತ್ತ್ಯಾ ಜನಿಪರಿಹರಣಾದ್ವಿಶ್ವಸೃಷ್ಟ್ಯಾದಿಶಕ್ತೇ-
ರ್ನಿಸ್ಸೀಮಾನನ್ದದೇಶಾನ್ವಯತ ಉಪಜಗೌ ರಕ್ಷಣಾರ್ಥಾವತಾರಾತ್ |
ಸುಪ್ರಖ್ಯಾತಾನುಭಾವಾದ್ವಿವಿಧವಿಹರಣಾದ್ವ್ಯಕ್ತಿವೈಚಿತ್ರ್ಯವತ್ತ್ವಾ-
ದ್ಭಕ್ತ್ಯುದ್ರ್ರಾಗ್ದೈಶ್ಯಭಾವಾದಖಿಲಫಲಕೃತೇರ್ಮುಕ್ತಿಸೌಖ್ಯಂ ಮುಕುನ್ದೇ||

(ಈ ಅಷ್ಟಮದಶಕದ ಸಾರಾಂಶ)—

ಈ ಎಂಟನೆಯದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ಭಗವನ್ತನು ತಮ್ಮ ಅನುಬನ್ಧಿಗಳಲ್ಲಿಯೂ ಪ್ರೀತಿವಿಶಿಷ್ಟನಾಗಿ ಅನುಗ್ರಹಮಾಡಿದುದನ್ನು ತಿಳಿದು, ಸಕಲಚೇತನರನ್ನೂ ಭಗವದ್ಭಕ್ತರನ್ನಾಗಿ ಮಾಡಲು ಉದ್ದೇಶಿಸಿ, ಭಗವನ್ತನ ಮೋಕ್ಷಪ್ರದತ್ವವನ್ನು ಕುರಿತು ಉಪದೇಶವಂಮಾಡಿದಾಗ್ಯೂ ಅವರು ಉದಾಸೀನರಾಗಿರುವುದನ್ನು ನೋಡಿ, ತಮಗೆ ಭಗವತ್ಸಂಶ್ರಯಣದಿಂದ ಉಂಟಾದ ಮೋಕ್ಷಸಾಮ್ರಾಜ್ಯದ ಪರಮಾನನ್ದಸಮೃದ್ಧಿಯನ್ನು ವರ್ಣಿಸಿ ಇರುತ್ತಾರೆ.



## ಶ್ರೀಃ

# ದ್ವಿತೀಯಶತಕದಲ್ಲಿ—ನವಮದಶಕ.

## (ಎಮ್ಮಾವೀಡು—)

(ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ಭಗವಂತನನ್ನು ಸಂಬೋಧಿಸಿ—"ನನಗೆ ಮೋಕ್ಷವು ನನ್ನ ಪ್ರೀತಿಗೋಸ್ಕರ ಬೇಡ ; ನಿನ್ನ ಪ್ರೀತಿಗೋಸ್ಕರವೇ ಉಂಟಾಗಲಿ"—ಎಂದು ಹೇಳಿ ಕೈಂಕರ್ಯದ ನಿಷ್ಕರ್ಷವಂ ಮಾಡುತ್ತಾರೆ.)

---

(೧) ಎಮ್ಮಾವೀಟ್ಟು ತ್ತಿಱಮುಮ್ ಶೆಪ್ಪಮ್, ನಿನ್
ಶೆಮ್ಮಾ ಪಾದಪ್ಪಱ್ಪು ತ್ತಲೈ ಶೇರ್‌ತ್ತು ಒಲ್ಲೈ
ಕೈಮ್ಮಾ ತುನ್ಬಮ್, ಕಡಿನ್ದ ಪಿರಾನೇ.
ಅಮ್ಮಾವಡಿಯೇನ್ ವೇಣ್ಡುವದೀದೇ.

ಪ್ರ|| ಎ ಮ್ಮಾವೀಟ್ಟು - ಸಕಲವಿಧವಾದ ಮಹಿಮೆಯುಳ್ಳ ಮೋಕ್ಷದ, ತಿಱ ಮುಮ್–ಪ್ರಭಾವವನ್ನೂ, ಶೆಪ್ಪಮ್–ನಾವು ಹೇಳುವುದಿಲ್ಲ (ಅಪೇಕ್ಷಿಸುವುದಿಲ್ಲ); ನಿನ್–ನಿನ್ನ, ಶೆಮ್ಮಾ–ಕೆಂಪಾಗಿಯೂ ಭೋಗ್ಯವಾಗಿಯೂ ಇರುವ, ಪಾದಪ್ಪಱ್ಪು–ಚರಣಕಮಲಗಳನ್ನು, ತಲೈ–(ನನ್ನ) ತಲೆಯಮೇಲೆ, ಒಲ್ಲೈ–ಶೀಘ್ರವಾಗಿ, ಶೇರ್‌ತ್ತು – ಸೇರಿಸಬೇಕು ; ಕೈಮ್ಮಾ – ಸೊಂಡಿಲನ್ನು ಮೇಲಕ್ಕೆ ಎತ್ತಿ ಕೂಗುತ್ತಿರುವ ಗಜೇಂದ್ರನ, ತುನ್ಬಮ್ – ದುಃಖವನ್ನು, ಕಡಿನ್ದ – ನಾಶಮಾಡಿದ, ಪಿರಾನೇ–ಸ್ವಾಮಿಯೇ, ಅಮ್ಮಾ–ನಮ್ಮ ಪ್ರಭುವೇ, ಅಡಿಯೇನ್ ವೇಣ್ಡುವದು–ನಾನು ಪ್ರಾರ್ಥಿಸುವುದು, ಈದೇ–ಇದೇ (ಇಷ್ಟುಮಾತ್ರವೇ).

( ಸ–ಗಾ–ರ || ) –

**ತತ್ತ್ವಾದೃಗುತ್ತಮಪದಂ ನ ಹಿ ಮೋಕ್ಷಭಾಗ್ಯಂ**
**ಕಾಂಕ್ಷೇ ತ್ವದೀಯಪದಪಂಕಜಯುಗ್ಮಮೇವ |**
**ತ್ವಂ ಮೇ ನಿಧೇಹಿ ಶಿರಸೀಹ ಗಜಾರ್ತಿಹಾರಿನ್ !**
**ಮೇ ವಾಞ್ಛಿತಂ ಹಿ ಸಕಲಂ ತ್ವಿದಮೇವ ನಾಥ ||**

ತಾ॥ ಅಪಾರಮಹಿಮೆಯುಳ್ಳ ಮೋಕ್ಷವನ್ನೂ ಕೂಡ ನಾನು ಅಪೇಕ್ಷಿಸುವುದಿಲ್ಲ. ಅತ್ಯನ್ತ ಭೋಗ್ಯವಾಗಿರುವ ನಿನ್ನ ಚರಣಕಮಲಗಳನ್ನು ನನ್ನ ಶಿರಸ್ಸಿನಲ್ಲಿ ಶೀಘ್ರವಾಗಿ ನಾನು ಧರಿಸಬೇಕು—ಇದೇ ನನ್ನ ಪ್ರಾರ್ಥನೆ. ಗಜೇಂದ್ರನ ದುಃಖವನ್ನು ಧ್ವಂಸಮಾಡಿದ ಮಹೋಪಕಾರಕನಾದ ನನ್ನ ಸ್ವಾಮಿಯೇ! ಈ ನನ್ನ ಪ್ರಾರ್ಥನೆಯನ್ನು ನೆರವೇರಿಸು—ಎಂದು ಭಾವವು.

(೨) ಈದೇ ಯಾನುನ್ನೈಕ್ ಕೊಳ್ವದೆಞ್ಞಾನ್ಱುಮ್, ಎನ್
ಮೈತೋಯ್ ಶೋದಿ ಮಣಿವಣ್ಣ ಎನ್ದಾಯ್,
ಎಯ್ದಾ ನಿನ್ಕೞಲ್ ಯಾನೆಯ್ದ, ಞಾನ
ಕ್ಕೈತ್ತಾ ಕಾಲಕ್ಕೞಿವು ಶೆಯ್ಯೇಲೇ.

ಪ್ರ॥ ಎನ್—ನನ್ನ, ಮೈತೋಯ್ – ನೀಲವರ್ಣದಿಂದ ತುಂಬಿದ, ಶೋದಿ—ಜ್ಯೋತಿಸ್ಸುಳ್ಳ, ಮಣಿ – ಮಾಣಿಕ್ಯದಂತೆ, ವಣ್ಣಮ್ – ದೇಹಕಾನ್ತಿಯುಳ್ಳ, ಎನ್ದಾಯ್—ನನ್ನ ಸ್ವಾಮಿಯೇ, ಉನ್ನೈ – ನಿನ್ನನ್ನು, ಯಾನ್—ನಾನು, ಎಞ್ಞಾನ್ಱುಮ್—ಯಾವಾಗಲೂ, ಕೊಳ್ವದು—ಪ್ರಾರ್ಥಿಸಿ ಹೊಂದಬೇಕಾದುದು, ಈದೇ—ಇದೇ ; ಎಯ್ದಾ—ಹೊಂದಲಶಕ್ಯವಾದ, ನಿನ್ಕೞಲ್—ನಿನ್ನ ಪಾದಗಳನ್ನು, ಯಾನ್—ನಾನು, ಎಯ್ದ—ಹೊಂದುವುದಕ್ಕೋಸ್ಕರ, ಞಾನಕ್ಕೈ—ಜ್ಞಾನವೆಂಬ ಹಸ್ತವನ್ನು, ತಾ—(ನನಗೆ) ಕೊಡು ; ಕಾಲಕ್ಕೞಿವು—ಕಾಲಹರಣವನ್ನು, ಶೆಯ್ಯೇಲೇ—ಮಾಡಲೇಬೇಡ.

(ಸಂ—ಗಾ—ರ॥)—

ಮನ್ಮಥ! ನೀಲಮಣಿವರ್ಣ! ಭವನ್ತಮೇವ-
ಮೇತಾವದೇವ ಸತತಂ ಕಿಲ ಹನ್ತ! ಯಾಚೇ।
ತ್ವತ್ಪಾದಲಾಭಶರಣಂ ಮಮ ಭಕ್ತಿಯೋಗಂ
ತ್ವಂ ದೇಹಿ ಮೇ! ನ ಕುರು ಕಾಲವಿಲಮ್ಬಮತ್ರ॥

ತಾ॥ ನೀಲಮಣಿವರ್ಣನಾದ ನನ್ನ ಸ್ವಾಮಿಯೇ! ನಿನ್ನನ್ನು ನಾನು ಯಾವಾಗಲೂ ಪ್ರಾರ್ಥಿಸಿ ಕೊಂಬೇಕಾದುದು ಯಾವುದೆಂದರೆ, ನಿನ್ನ ಪಾದಗಳನ್ನು ನಾನು ಹೊಂದುವಂತೆ ನನಗೆ ಜ್ಞಾನವನ್ನು (ಭಕ್ತಿಯೋಗವನ್ನು) ಅನುಗ್ರಹಿಸು; ಕಾಲವಿಲಮ್ಬಮಾಡದೆ ಈ ನನ್ನ ಪ್ರಾರ್ಥನೆಯನ್ನು ನೆರವೇರಿಸು—ಎಂದು ತಾತ್ಪರ್ಯ.

(೩) ಶೆಯ್ಯೇಲ್ ತೀವಿನೈ ಯೆನ್ರರುಳ್‌ಶೆಯ್ಯುಮ್, ಎನ್
ಕೈಯಾರ್ ಶಕ್ಕರ ಕ್ಕಣ್ಣಪಿರಾನೇ,
ಐಯಾರ್ ಕಣ್ಡಮಡೈಕ್ಕಿಲುಮ್, ನಿನ್ ಕಳಲ್
ಎಯ್ಯಾದೇತ್ತವರುಳ್ ಶೆಯ್ಯೆನಕ್ಕೇ.

ಪ್ರ|| ತೀವಿನೈ – ದುಷ್ಟಕೃತ್ಯಗಳನ್ನು, ಶೆಯ್ಯೇಲ್–ಮಾಡಬೇಡ, ಎನ್ರು–ಎಂದು, ಎನ್–ನನ್ನ ವಿಷಯದಲ್ಲಿ, ಅರುಳ್–ಕೃಪೆಮಾಡಿದ, ಕೈ ಆರ್–ಹಸ್ತದಲ್ಲಿ ಸೇರಿರುವ, ಶಕ್ಕರಮ್ – ಚಕ್ರಾಯುಧವುಳ್ಳ, ಕಣ್ಣ – ಶ್ರೀಕೃಷ್ಣ ರೂಪಿಯಾದ, ಪಿರಾನೇ–ಸ್ವಾಮಿಯೇ, ಐ ಆರ್–ಶ್ಲೇಷ್ಮದಿಂದ ತುಂಬಿರುವ, ಕಣ್ಡಮ್–ಕಂಠವು, ಅಡೈಕ್ಕಿಲುಮ್–ಮಾತಿಲ್ಲದಂತೆ ಅಡ್ಡಿಮಾಡಿದರೂ, ನಿನ್–ನಿನ್ನ, ಕಳಲ್–ಪಾದಗಳನ್ನು, ಎಯ್ಯಾದು – ಶ್ರಮವಿಲ್ಲದೆ, ಏತ್ತ - (ನಾನು) ಸ್ತೋತ್ರಮಾಡುವಂತೆ, ಎನಕ್ಕೇ ಅರುಳ್ ಶೆಯ್–ನನಗೆ ಕೃಪೆಮಾಡು.

( ಸ–ಗಾ–ರ || ) —

**ಮಾಭೂಸ್ತು ಪಾಪಕೃದಿತಿ ಸ್ವಯಮೇವ ಚಕ್ರಂ**
**ಧೃತ್ವಾ ಚ ಪಾಣಿತಲತಃ ಕೃಪಯಾ ಬ್ರವೀಷಿ |**
**ಹೇ ಕೃಷ್ಣ! ನಾಥ! ತವ ಪಾದಯುಗಸ್ತುತೌ ಮೇ**
**ಕಣ್ಠಾವರೋಧನವಿಧಾವಪಿ ದೇಹಿ ಶಕ್ತಿಮ್ ||**

ತಾ|| ಚಕ್ರಪಾಣಿಯಾಗಿ ಶ್ರೀಕೃಷ್ಣ ರೂಪಿಯಾದ ನನ್ನ ಸ್ವಾಮಿಯೇ! "ಪಾಪವನ್ನು ಮಾಡಬೇಡ"—ಎಂದು ನೀನು ಉಪದೇಶಿಸಿರುತ್ತೀಯೆ. ನಿನ್ನ ಪಾದಾರವಿನ್ದಗಳ ಸ್ತುತಿಯನ್ನು ನಾನು ಯಾವಾಗಲೂ ನಿರಾಯಾಸವಾಗಿ ಮಾಡುತ್ತಿರುವಂತೆ ಉತ್ಕ್ರಾನ್ತಿಸಮಯದಲ್ಲೂ—(ಶ್ಲೇಷ್ಮವು ಕಂಠದಲ್ಲಿ ಸೇರಿ ಅಡ್ಡಿಮಾಡುತ್ತಿರುವಾಗಲೂ) ಕೂಡ, ನನಗೆ ಶಕ್ತಿಯನ್ನು ಅನುಗ್ರಹಿಸು.

(೪) ಎನಕ್ಕೇ ಆಟ್ಚೆಯ್ಯೆಕ್ಕಾಲತ್ತುಮ್ಎನ್ರು, ಎನ್
ಮನಕ್ಕೇ ವನ್ದಿಡೈ ಪಿರಿಯಾದು ಮನ್ನಿ,
ತನಕ್ಕೇಯಾಹ ವೆನೈ ಕ್ಕೊಳ್ಳುಮೀದೇ,
ಎನಕ್ಕೇ ಕಣ್ಣನೈ ಯಾನ್‌ಕೊಳ್ ಶಿರಪ್ಪೇ.

ಪ್ರ॥ ಎಕ್ಕಾಲತ್ತುಮ್—ಸರ್ವಕಾಲದಲ್ಲಿಯೂ, ಎನಕ್ಕೇ – ನನಗೇ, ಆಳ್ ಶೆಯ್—ಕೈಙ್ಕರ್ಯವನ್ನು ಮಾಡು, ಎನ್ರು – ಎಂದು ಹೇಳಿ, ಎನ್ ಮನಕ್ಕೇ – ನನ್ನ ಮನಸ್ಸಿನಲ್ಲೇ, ವನ್ದು–ಬಂದು, ಇಡೈ ವೀಡಿನ್ರಿ–ಸ್ವಲ್ಪವೂ ಎಡೆಬಿಡದೆ, ಮನ್ನಿ–ಚಿರನ್ನಾಗಿ ಸ್ಥಿರವಾಗಿ ನಿಂತು, ತನಕ್ಕೇ ಆಕ – ತನಗೆ ವಶವಾಗುವಂತೆ, ಎನೈಕ್ಕೊಳ್ಳುಮ್—ನನ್ನನ್ನು ಅಂಗೀಕರಿಸೋಣವೆಂಬ, ಈದೇ–ಇದೇ, ಎನಕ್ಕೇ – ನನಗೆ ಅನುರೂಪವಾಗಿ, ಕಣ್ಣನೈ–ಶ್ರೀಕೃಷ್ಣನನ್ನು, ಯಾನ್‌ಕೊಳ್—ನಾನು ಪ್ರಾರ್ಥಿಸುವ, ಶಿಱಪ್ಪು– ಪ್ರಯೋಜನವು.

( ಸ–ಗಾ–ರ || )—

ತ್ವಂ ಸನ್ತತಂ ಚ ಮಮ ದಾಸ್ಯರತೋ ಭವೇತಿ
ಚಿತ್ತೇ ಮಮ ಸ್ಥಿತಮಮುಂ ಕಿಲ ಹನ್ತ ! ಕೃಷ್ಣಮ್ |
ಏತಾವದೇವ ಹಿ ಫಲಂ ಪರಮನ್ತು ಯಾಚೇ !
ತ್ವಂ ಮಾಂ ವಿಧೇಹಿ ಸತತಂ ಚ ತವೈವ ದಾಸಮ್ ||

ತಾ॥ " ಯಾವಾಗಲೂ ನನ್ನ ಕೈಂಕರ್ಯವನ್ನೇ ನೀನು ಮಾಡುತ್ತಿರು "— ಎಂದು ಉಪದೇಶಿಸಿ, ನನ್ನ ಮನಸ್ಸಿನಲ್ಲೇ ನೀನು ಸ್ಥಿರವಾಗಿ ನಿಂತು, ನಾನು ನಿನಗೆ ಎಂದಿಗೂ (ಚನ್ದನ ಕುಸುಮಾದಿಗಳಂತೆ) ಶೇಷಭೂತನಾಗಿ ಭೋಗ್ಯವಾಗಿರುವಂತೆ ನನ್ನನ್ನು ನೀನು ಅಂಗೀಕರಿಸಬೇಕು. ಇದೇ ನನ್ನ ಪ್ರಾರ್ಥನೆ—ಎಂದು ಶ್ರೀ ಕೃಷ್ಣನನ್ನು ಕುರಿತು ವಿಜ್ಞಾಪಿಸುತ್ತಾರೆ.

(೨೪) ಶಿಱಪ್ಪಿಲ್ ವೀಡು ಶುವರ್ಕ್ಕನರಕಮ್,
ಇಱಪ್ಪಿಲೆಯ್ದುಕ ವೆಯ್‌ದಱ್ಕ, ಯಾನುಮ್
ಪಿಱಪ್ಪಿಲ್ ಪಲ್‌ಪಿಱವಿ ಪ್ಪೆರುಮಾನೈ
ಮಱಪ್ಪೊನ್ರಿನ್ರಿ ಯೆನ್ರುಮ್ ಮಕಿೞ್ವೇನೇ.

ಪ್ರ॥ ಇಱಪ್ಪಿಲ್ -- ಈ ಶರೀರದ ತ್ಯಾಗಸಮಯದಲ್ಲಿ, ಶಿಱಪ್ಪಿಲ್–ಆನನ್ದವೆಂಬ ಮಹಾಮಹಿಮೆಯುಳ್ಳ, ವೀಡು–ಮೋಕ್ಷವನ್ನೂ, ಶುವರ್ಕ್ಕ ನರಕಮ್—ಸ್ವರ್ಗನರಕಗಳನ್ನೂ, ಎಯ್ದುಕ–ಹೊಂದಲಿ, ಎಯ್‌ದಱ್ಕ–ಹೊಂದದೆ ಹೋಗಲಿ; ಪಿಱಪ್ಪು ಇಲ್–ಜನ್ಮವಿಲ್ಲದೆ ಇದ್ದರೂ, ಪಲ್‌ಪಿಱವಿ–ಅನೇಕ ಅವತಾರಗಳನ್ನು ಮಾಡಿದ, ಪೆರುಮಾನೈ–ಸರ್ವೇಶ್ವರನನ್ನು, ಒನ್ರು ಮಱಪ್ಪು ಇನ್ರಿ–ಸ್ವಲ್ಪವೂ ಮರೆಯದೆ, ಎನ್ರುಮ್–ಯಾವಾಗಲೂ, ಯಾನುಮ್–ನಾನೂ, ಮಕಿೞ್ವೇನ್–ಆನನ್ದಾನುಭವವನ್ನು ಮಾಡುವಂತೆ ಆಗಬೇಕು.

( ಸ-ಗಾ-ರ || )—

ದೇಹಾವಸಾನಫಲಿತಂ ಕಿಲ ಮುಕ್ತಿಭಾಗ್ಯಂ
ಸ್ವರ್ಗಾದಿನಾರಕಮಪೀಹ ಭವೇತ್ತಥಾಽನ್ಯತ್ |
ನಾನಾಜನಿಂ ಚ ಭಗವನ್ತಮಜಾಯಮಾನಂ
ನಿತ್ಯಂ ಸ್ಮರನ್ನಹಮುಪಾರಮುದಾಽನ್ವಿತಸ್ಸ್ಯಾಮ್ ||

ತಾ|| ಈ ಶರೀರವನ್ನು ಬಿಟ್ಟುಹೋಗುವ ಸಮಯದಲ್ಲಿ ದೇಹಾತ್ಮ ವಿವೇಕದಿಂದ ಮೋಕ್ಷವೋ, ದೇಹಾತ್ಮಭ್ರಮದಿಂದ ಸ್ವರ್ಗನರಕಾದಿಗಳೋ ಯಾವುದಾದರೂ ಬರಲಿ, ಬರದೆಹೋಗಲಿ, ನೀನು ಇಷ್ಟುಮಾತ್ರ ನನಗೆ ಅನುಗ್ರಹವಂ ಮಾಡಬೇಕು, ಏನೆಂದರೆ—" ಅಜಾಯಮಾನೋಬಹುಧಾವಿಜಾಯತೇ " ಎಂಬಂತೆ ಅನೇಕ ಅವತಾರಗಳನ್ನು ಮಾಡಿದ ಸರ್ವೇಶ್ವರನಾದ ನಿನ್ನನ್ನು ನಾನು ಎಂದಿಗೂ ಮರೆಯದೆ ಅನವರತ ಸ್ಮರಣದಿಂದ ನಿತ್ಯಾನನ್ದಭರಿತನಾಗಿರಬೇಕು. ಈ ಪ್ರಕಾರ ನನಗೆ ಅನುಗ್ರಹವಂ ಮಾಡು—ಎಂದು ಪ್ರಾರ್ಥಿಸುತ್ತಾರೆ.

(೬) ಮಕಿೞ್ಕೊಳ್ ದೆಯ್ವಮುಲೋಕಮಲೋಕಮ್
ಮಕಿೞ್ಕೊಳ್ ಶೋದಿ ಮಲರ್ನ್ದವಮ್ಮಾನೇ,
ಮಕಿೞ್ಕೊಳ್ ಶಿನ್ದೈಶೊಲ್ ಶೆಯ್ಕೈಕೊಣ್ಡು, ಎನ್ಱುಮ್
ಮಕಿೞ್ವುೞ್ಱುನ್ನೈ ವಣಙ್ಗ ವಾರಾಯೇ.

ಪ್ರ|| ಮಕಿೞ್ಕೊಳ್ – ಸುಖಾನುಭವ ಮಾಡುವ, ದೆಯ್ವಮ್ – ದೇವ ವರ್ಗವೂ, ಉಲೋಕಮ್ – ಜ್ಞಾನಪ್ರಕಾಶವುಳ್ಳ ಮಾನುಷವರ್ಗವೂ, ಅಲೋಕಮ್–ಜ್ಞಾನಪ್ರಕಾಶರಹಿತವಾದ ತಿರ್ಯಕ್ಸ್ಥಾವರ ವರ್ಗಗಳೂ, ಮಕಿೞ್ಕೊಳ್– ತೇಜಸ್ವಿತ್ವದಿಂದ ಆನನ್ದವುಳ್ಳ, ಶೋದಿ–ಚನ್ದ್ರಾದಿತ್ಯಾದಿ ಜ್ಯೋತಿರ್ಮಯ ವಸ್ತುಗಳೂ ಆಗಿ, ಮಲರ್ನ್ದ–ತಾನೇ (ಸೃಷ್ಟಿಕಾಲದಲ್ಲಿ ತನ್ನ ಸಂಕಲ್ಪದಿಂದ) ತನ್ನ ಸ್ವರೂಪವನ್ನು ವಿಸ್ತರಿಸಿದ, ಅಮ್ಮಾನೇ – ಸ್ವಾಮಿಯಾದವನೇ, ಮಕಿೞ್ಕೊಳ್– ನಿನ್ನಲ್ಲಿ ಪ್ರೀತಿಯಿಂದ ಕೂಡಿದ, ಶಿನ್ದೈ – ಮನೋಭಾವವನ್ನೂ, ಶೊಲ್–ಉಕ್ತಿಯನ್ನೂ, ಶೆಯ್ಕೈ – ಕಾಯಿಕವ್ಯಾಪಾರವನ್ನೂ, ಕೊಣ್ಡು–ವಹಿಸಿ, ಎನ್ಱುಮ್– ಯಾವಾಗಲೂ, ಮಕಿೞ್ವುೞ್ಱು – ಆನನ್ದವಂಪಡೆದು, ಉನ್ನೈವಣಙ್ಗ–(ನಾನು) ನಿನ್ನನ್ನು ನಮಸ್ಕರಿಸಲು (ಕರಣತ್ರಯದಿಂದಲೂ ಅನುಭವಿಸಲು) ಅನುಕೂಲನಾಗಿ, ವಾರಾಯ್–(ನೀನು) ಬಾ (ದಯೆಮಾಡು).

( ಸ-ಗಾ-ರ— ॥ )

ದೇವಾದಿಲೋಕನರಲೋಕಜಡಾದಿಜನ್ಮೊ-
ನುತ್ಪಾದ್ಯ ಭಾಸ್ವರಮಹಾಪ್ರಭಯಾ ಽನ್ವಿತಸ್ತ್ವಮ್ ।
ಸ್ವಾಮಿನ್ ! ಮನೋವಚನಕರ್ಮಸಮನ್ವಿತಂ ಮಾಂ
ಪ್ರಾಪ್ಯ ಪ್ರಹರ್ಷಯ ಸವಾಗಮತಃ ಪ್ರಣಮ್ರಮ್ ॥

ತಾ॥ ಸುಖಾನುಭವವನ್ನುಂಟುಮಾಡುವ ದೇವವರ್ಗವೂ, ಜ್ಞಾನಪ್ರಕಾಶವುಳ್ಳ ಮಾನುಷವರ್ಗವೂ, ಜ್ಞಾನರಹಿತವಾದ ತಿರ್ಯಕ್‌ಸ್ಥಾವರ ವರ್ಗಗಳೂ, ಜ್ಯೋತಿರ್ಮಣ್ಡಲಾದಿಗಳೂ ತಾನೇ ಆಗುವಂತೆ "ಬಹುಸ್ಯಾಮ್" ಎಂದು ಸಂಕಲ್ಪ ಮಾಡಿದ ಸ್ವಾಮಿಯೇ ! ನನ್ನ ಕರಣತ್ರಯವೂ ನಿನ್ನಲ್ಲೇ ಸಕ್ತವಾಗಿ ನಾನು ಆನನ್ದವನ್ನು ಪಡೆದು ನಿನ್ನ ಸೇವೆಯನ್ನೇ ಅನವರತ ಮಾಡುವಂತೆ ನೀನು ಕೃಪೆಯಿಂದ ನನ್ನ ಸಮೀಪಕ್ಕೆ ದಯಮಾಡಬೇಕೆಂದು ಪ್ರಾರ್ಥಿಸುತ್ತಾರೆ.

(೭) ವಾರಾಯುನ್ ತಿರುಪ್ಪಾದ ಮಲರ್‌ಕ್ಕೀೞ್,
ಪೇರಾದೇ ಯಾನ್ ವನ್ದಡೈಯುಮ್‌ಪಡಿ,
ತಾರಾದಾಯ್, ಉನ್ನೈಯೆನ್ನುಳ್ ವೈಪ್ಪಿಲೆನ್ನುಮ್,
ಆರಾದಾಯ್, ಎನಕ್ಕೆನ್ರುಮೆಕ್ಕಾಲೇ.

ಪ್ರ॥ ಉನ್ನೈ-ನಿನ್ನನ್ನು, ಎನ್ನುಳ್-ನನ್ನ ಮನಸ್ಸಿನಲ್ಲಿ, ಎನ್ನುಮ್-ಯಾವಾಗಲೂ, ವೈಪ್ಪಿಲ್-ಇಡುವ ವಿಷಯದಲ್ಲಿ, ಎನಕ್ಕು-ನನಗೆ, ಆರಾದಾಯ್-ತೃಪ್ತಿಯುಂಟುಮಾಡದೆ ಇರುವಷ್ಟು ಭೋಗ್ಯನಾಗಿ, ಎನ್ರುಮ್ - ಪ್ರತಿದಿನವೂ, ಎಕ್ಕಾಲ್-ಪ್ರತಿಕ್ಷಣದಲ್ಲೂ, ಉನ್-ನಿನ್ನ, ತಿರುಪ್ಪಾದ ಮಲರ್‌ಕ್ಕೀೞ್-ಚರಣಾರವಿನ್ದಗಳ ಕೆಳಗೆ, ಪೇರಾದೇ-ವಿಶ್ಲೇಷವಿಲ್ಲದಂತೆ, ಯಾನ್-ನಾನು, ವನ್ದು-ಬಂದು, ಅಡೈಯುಮ್‌ಪಡಿ - ಸೇರುವಂತೆ, ತಾರಾದಾಯ್-ಸ್ಥಲವನ್ನು ಕೊಡದೆ ಇರುವವನೇ !—ವಾರಾಯ್-(ನೀನೇ) ನನ್ನ ಸಮೀಪಕ್ಕೆ ಬಂದು ನನ್ನ ಮನೋರಥವನ್ನು ಪೂರ್ತಿಮಾಡು.

( ಸ-ಗಾ-ರ || )—

ತ್ವಾಂ ನಿತ್ಯಮೇವ ಹೃದಿ ಮೇ ವಿನಿವೇಶ್ಯ ಹೃದ್ಯಂ
ತ್ವತ್ಪಾದಪಙ್ಕಜಮನಾರತಮಾಶ್ರಿತಸ್ಸನ್ |
ಧನ್ಯೋ ಭವೇಯಮಿತಿ ಮೇ ಮತಿರಸ್ತಿ ಪೂರ್ಣಾ !
ತ್ವಂ ಮಾಂ ವಿಯೋಜಯಸಿ ಕಿಂ ? ಸಮುಪೈಹಿ ತೂರ್ಣಮ್ ||

ತಾ|| ನಿತ್ಯಭೋಗ್ಯನಾದ ನಿನ್ನನ್ನು ಯಾವಾಗಲೂ ನನ್ನ ಮನಸ್ಸಿನಲ್ಲಿ ಇಟ್ಟು ಪ್ರತಿದಿನವೂ ಪ್ರತಿಕ್ಷಣದಲ್ಲೂ ನಿನ್ನ ಪಾದಾರವಿನ್ದಗಳ ಕೆಳಗೆ ಅವಿಚ್ಛಿನ್ನವಾಗಿ ನಾನು ಸೇರಿರುವಂತೆ ನೀನು ಅದ್ಯಾಪಿ ಫಲವನ್ನು ಕೊಡದೆ ಇರುತ್ತೀಯೆ. ಈ ನನ್ನ ಮನೋರಥವನ್ನು ಪೂರ್ತಿಮಾಡಲು ನೀನೇ ನನ್ನ ಸಮೀಪಕ್ಕೆ ಬಂದು ಅನುಗ್ರಹಮಾಡು.

(೮) ಎಕ್ಕಾಲತ್ತೆನ್ದೈಯಾಯೆನ್ನುಳ್ ಮನ್ನಿಲ್, ಮ-
ಱ್ಱೆಕ್ಕಾಲತ್ತಿಲುಮ್ ಯಾದೊನ್ಱುಮ್ ವೇಣ್ಡೇನ್,
ಮಿಕ್ಕಾರ್ ವೇದವಿಮಲರ್ ವಿೞುಙ್ಗುಮ್, ಎನ್
ಅಕ್ಕಾರಕ್ಕನಿಯೇ ಉನ್ನೈಯಾನೇ.

ಪ್ರ|| ಮಿಕ್ಕಾರ್—ಶ್ರೇಷ್ಠರಾದ, ವೇದವಿಮಲರ್—ವೇದಾಭ್ಯಾಸದಿಂದ ನಿರ್ಮಲರಾದವರು, ವಿೞುಙ್ಗುಮ್ — ಅತ್ಯನ್ತಪ್ರೀತಿಯಿಂದ ಭುಜಿಸುವ, ಎನ್ ಅಕ್ಕಾರಕ್ಕನಿಯೇ—ನನ್ನ ಮಧುರತಮವಾದ ಪಕ್ವಫಲವೇ !, ಎಕ್ಕಾಲತ್ತು—ಯಾವುದಾದರೂ ಒಂದು ಸಮಯದಲ್ಲಿ (ಅಲ್ಪಕಾಲವಾದರೂ), ಎನ್ದೈಯಾಯ್—ನನಗೆ ಸ್ವಾಮಿಯಾಗಿ, ಎನ್ನುಳ್—ನನ್ನ ಮನಸ್ಸಿನಲ್ಲಿ, ಮನ್ನಿಲ್—(ನೀನು) ಸ್ಥಿರವಾಗಿನಿಲ್ಲುವ ಪಕ್ಷದಲ್ಲಿ, ಮಱ್ಱು ಎಕ್ಕಾಲತ್ತಿಲುಮ್ — ಮಿಕ್ಕ ಯಾವಸಮಯದಲ್ಲೂ, ಒನ್ಱುಮ್—ಯಾವುದೊಂದನ್ನೂ, ಯಾನ್—ನಾನು, ಉನ್ನೈ—ನಿನ್ನನ್ನು, ವೇಣ್ಡೇನ್—ಬೇಡುವುದಿಲ್ಲ. (ನನಗೆ ಅದಕ್ಕಿಂತ ಬೇರೆ ಯಾವುದೂ ಅಪೇಕ್ಷಿತವಿಲ್ಲ.)

( ಸ-ಗಾ-ರ || )—

ಪ್ರಾಜ್ಞೈಸ್ತು ವೈದಿಕವರೈರ್ವಿಮಲೈರ್ಹಿ ಭೋಜ್ಯ-
ಸ್ಸ್ವಾಮೀ ಭವಾನ್ ರಸಘನಂ ಮಧುರಂ ಫಲಂ ಮೇ |
ಚಿತ್ತೇ ಸದಾಽಪಿ ಪರಮೋ ಯದಿ ಭಾಸಿ ನಾಥ !
ತ್ವಾಮರ್ಥಯೇ ನ ಕಿಲ ಚಾತುಚಿದನ್ಯಮರ್ಥಮ್ ||

ತಾ|| ಪ್ರಾಜ್ಞರಾಗಿಯೂ ಶುದ್ಧವೃತ್ತರಾಗಿಯೂ ಇರುವ ವೈದಿಕಶ್ರೇಷ್ಠರಿಂದ ಪರಿಭುಜ್ಯಮಾನವಾದ ಮಧುರತಮ ಪಕ್ವಫಲದಂತಿರುವ ನನ್ನ ಸ್ವಾಮಿಯೇ! ನಾನು ಸಕಲವಿಧ ಕೈಂಕರ್ಯವಂ ಮಾಡುವಂತೆ ನೀನು ನನ್ನ ಮನಸ್ಸಿನಲ್ಲಿ ಸ್ವಲ್ಪಕಾಲ ಸ್ಥಿರವಾಗಿ ನಿಲ್ಲಬೇಕೆಂಬುವ ಈ ನನ್ನ ಪ್ರಾರ್ಥನೆಯನ್ನು ನೀನು ಸಫಲಮಾಡುವ ಪಕ್ಷದಲ್ಲಿ ನನಗೆ ಇನ್ನು ಯಾವಪ್ರಾರ್ಥನೀಯಾಂಶವೂ ಯಾವಕಾಲದಲ್ಲೂ ಇರುವುದಿಲ್ಲ. (ಭಗವತ್ಸಂಶ್ಲೇಷದಲ್ಲಿಯೂ ಕೈಂಕರ್ಯದಲ್ಲಿಯೂ ಇರುವ ಉತ್ಕಟ ಪ್ರೀತಿಯಿಂದ ಹೀಗೆ ಹೇಳುತ್ತಾರೆ.)

(೯) ಯಾನೇ ಯೆನ್ನೈ ಯಱಿಯ ಕಿಲಾದೇ,
ಯಾನೇ ಯೆನ್ ತನದೇ ಯೆನ್ರಿರುನ್ದೇನ್,
ಯಾನೇ ನೀಯೆನ್ನುಡೈಮೈಯುಮ್ ನೀಯೇ,
ವಾನೇ ಯೇತ್ತುಮೆಮ್ ವಾನವರೇಱೇ.

ಪ್ರ|| ಯಾನೇ - ನಾನೇ, ಎನ್ನೈ - ನನ್ನನ್ನು, ಅಱಿಯಕಿಲಾದೇ - ಯಥಾರ್ಥವಾಗಿ ತಿಳಿಯಲು ಶಕ್ತಿಯಿಲ್ಲದೆ, ಯಾನೇ - ನಾನೇ (ಸ್ವತನ್ತ್ರನೆಂದೂ), ಎನ್ ತನದೇ - ನನ್ನ ವಸ್ತುಗಳೇ (ಎಂದು ಅಭಿಮಾನದಿಂದಲೂ), ಎನ್ರು - ಅಹಂಕಾರ ಮಮಕಾರಗಳಿಂದ ತಿಳಿದುಕೊಂಡು, ಇರುನ್ದೇನ್ - ಇದ್ದೆನು. ವಾನೇ-ಪರಮಪದವಾಸಿಗಳೆಲ್ಲರೂ, ಏತ್ತುಮ್ - ಸ್ತೋತ್ರಮಾಡುವಂತೆ, ಎಮ್ ವಾನವರ್ ಏಱೇ - ಆ ನಿತ್ಯಸೂರಿಗಳಿಗೆ ನಿರ್ವಾಹಕನಾದವನೇ, ಯಾನ್ - ನಾನು, ನೀಯೇ - ನೀನೇ ಎಂಬಂತೆ ನಿನಗೆ ಸೇರಿದವನಾಗಿದೇನೆ. ಎನ್ನುಡೈಮೈಯುಮ್ - ನನ್ನ ಸ್ವತ್ತೆಲ್ಲಾ, ನೀಯೇ — ನೀನೇ ಎಂಬಂತೆ ನಿನಗೆ ಸೇರಿದುದಾಗಿದೆ. (ನಾನೂ ನನ್ನದೂ - ಎಲ್ಲಾ ನಿನ್ನ ಸ್ವತ್ತೇ - ಎಂದು ಭಾವವು.)

( ಸ-ಗಾ-ರ || )—

ನಾಹಂ ತ್ವವೇದಿಷಮಹೋ! ಮಮ ಚ ಸ್ವರೂಪಂ!
ಸೋಽಹಂ ಮಮೇದಮಿತಿ ಚ ಭ್ರಮವಶ್ಯ ಆಸಮ್ |
ಶ್ರೀದಿವ್ಯಸೂರಿನಿವಹೈರಪಿ ಸೇವ್ಯಮಾನ!
ಸ್ವಾಮಿನ್! ಮಮೇದಮಖಿಮಪ್ಯಹಹ! ತ್ವದೀಯಮ್ ||

ತಾ|| ನನ್ನ ಸ್ವರೂಪವನ್ನು ನಾನು ತಿಳಿದುಕೊಳ್ಳಲಾರದೆ ಅಹಂಕಾರ ಮಮಕಾರಗ್ರಸ್ತನಾಗಿ ನಾನು ಸ್ವತನ್ತ್ರನೆಂದು ಭಾವಿಸಿ, ನನ್ನ ವಸ್ತುಗಳು ಎಂಬ ಅಭಿ

ಮಾನವುಳ್ಳವನಾಗಿ ಇದ್ದೆನು. ನಿತ್ಯಸೂರಿ ಸಂಸೇವ್ಯನಾದ ನನ್ನ ಸ್ವಾಮಿಯೇ! (ನಿನ್ನ ಅನುಗ್ರಹದಿಂದ ಈಗ ನಾನು ತಿಳಿದುಇರುವ ಅಂಶವೇನೆಂದರೆ) ನಾನು ನನ್ನದು—ಎಂಬ ಇವೆಲ್ಲವೂ ನಿನ್ನ ಸ್ವತ್ತಾಗಿ ನಿನಗೇ ಶೇಷಭೂತವಾಗಿವೆ. (ಇಷ್ಟು ಮಟ್ಟಿಗೆ ತಿಳಿದು ನಿರ್ಣಯಿಸಿ — ನಿತ್ಯಸೂರಿಗಳು ನಿನ್ನನ್ನು ನಿತ್ಯವಾಗಿ ಅನುಭವಿಸುವ ಭಾಗ್ಯವು ಎಂತಹುದೋ—ಎಂದು ಕೊಂಡಾಡುತ್ತಾರೆ.)

(೧೦) ಏಳೇಲೇಱುಮ್ ವೆನ್ಱು ಏರ್‌ಕೊಳಿಲಙ್ಗೈಯೈ,
ನೀಱೆ ಶೆಯ್ದ ನೆಡುಂ ಶುಡರ್ ಚೋದಿ,
ತೇಱೇಲೆನ್ನೈ ಯುನ್ ಪೊನ್ನಡಿಚ್ಚೇರ್‌ತ್ತು, ಒಲ್ಲೈ
ವೇಱೆ ಪೋಕ ವೆಞ್ಞಾನ್ಱುಮ್ ವಿಡಲೇ.

ಪ್ರ॥ ಏಲ್ ಏಱು ಏೞುಮ್—ಮತ್ತ ವೃಷಭಗಳು ಏಳನ್ನೂ, ವೆನ್ಱು—ಜಯಿಸಿ, ಏರ್‌ಕೊಳ್ — ರಮ್ಯತೆಯುಳ್ಳ, ಇಲಙ್ಗೈಯೈ — ಲಂಕಾಪುರಿಯನ್ನು, ನೀಱು ಶೆಯ್ದ—ಭಸ್ಮಮಾಡಿದ, ನೆಡುಂ ಶುಡರ್ ಚೋದಿ—ಮಹಾತೇಜಸ್ವಿಯಾದ ಜ್ಯೋತಿರ್ಮಯನೇ!, ಎನ್ನೈ - ನನ್ನನ್ನು, ತೇಱೇಲ್ - ನಂಬದಂತೆ (ನನ್ನ ಹಿತವನ್ನು ನಾನು ತಿಳಿದವನೆಂದು ವಿಶ್ವಾಸಮಾಡದೆ ಕೈಬಿಡದೆ), ಉನ್ - ನಿನ್ನ, ಪೊನ್ನಡಿ - ಬಂಗಾರದಂತೆ ಉಜ್ಜ್ವಲವಾದ ಪಾದಗಳಲ್ಲಿ, ಒಲ್ಲೈ - ಶೀಘ್ರವಾಗಿ, ಶೇರ್‌ತ್ತು - ಸೇರಿಸಿಕೊಂಡು, ವೇಱೆಪೋಕ—ಬೇರೆಹೋಗಲು (ವಿಷಯಾನ್ತರ ಪ್ರವಣನಾಗಿ ಅನ್ಯತ್ರ ಹೋಗಲು ), ಎಞ್ಞಾನ್ಱುಮ್ - ಯಾವಾಗಲೂ, ವಿಡಲ್ - ಬಿಡದೆ ಕಾಪಾಡು.

( ಸ–ಗಾ–ರ ॥ )—

ಸಪ್ತರ್ಷಭಾನಪಿ ವಿಜಿತ್ಯ ಹಿ ದಗ್ಧವಾಂಸ್ತ್ವಂ
ಲಂಕಾಪುರಂ ಸಪದಿ ರಮ್ಯತಮಂ ಚ ವೀರಃ ।
ಮಾಂ ನತ್ಯಜೇಸ್ತ್ವಮಹಹೋಜ್ಜ್ವಲದಿವ್ಯಮೂರ್ತೇ !
ಕ್ಷಿಪ್ರಂ ಚ ಸಂಗಮಯ ಮಾಂ ತವ ಪಾದಪದ್ಮೇ ॥

ತಾ॥ ಸಪ್ತ ವೃಷಭಗಳನ್ನೂ ಜಯಿಸಿ ಲಂಕಾಪುರವನ್ನು ಭಸ್ಮಮಾಡಿದ ಜ್ಯೋತಿರ್ಮಯನೇ! ನಾನು ನನ್ನ ಹಿತವನ್ನು ತಿಳಿದವನೆಂದು ನನ್ನನ್ನು ಕೈಬಿಡದೆ, ನಿನ್ನ ದಿವ್ಯಚರಣಾರವಿನ್ದಗಳಲ್ಲಿ ನನ್ನನ್ನು ಈಗಲೇ ಸೇರಿಸಿಕೊಂಡು ನಾನು ಅನ್ಯತ್ರ

(ವಿಷಯಾನ್ತರ ಪ್ರವೀಣನಾಗಿ) ಹೋಗದಂತೆ ಕಾಪಾಡು. (ಸರ್ವ ಪ್ರತಿಬನ್ಧಕ ನಿವೃತ್ತಿಯನ್ನೂ ಮಾಡಿ ನನ್ನೊಡನೆ ನೀನು ಸಂಶ್ಲೇಷವಂ ಈ ಕ್ಷಣವೇ ಮಾಡದೆ ಹೋದರೆ ನಾನು ಪ್ರಾಣವಂ ಧರಿಸಲಾರೆನೆಂದೂ ಭಾವವು).

(೧೧) ವಿಡಲಿಲ್ ಶಕ್ಕರತ್ತಣ್ಣಲೈ ಮೇವಲ್,
ವಿಡಲಿಲ್ ವಣ್‌ಕುರುಕೂರ್ ಚ್ಚಡಕೋಪನ್ ಶೊಲ್,
ಕೆಡಲಿಲಾಯಿರತ್ತುಳ್ಳಿವೈ ಪತ್ತುಮ್,
ಕೆಡಲಿಲ್ ವೀಡು ಶೆಯ್ಯುಮ್ ಕಿಳರ್‌ವಾರ್ಕ್ಕೇ.

ಪ್ರ|| ವಿಡಲಿಲ್–ಬಿಡದಂತೆ ಸೇರಿ ಇರುವ, ಶಕ್ಕರತ್ತು–ಚಕ್ರವನ್ನು ಧರಿಸಿರುವ, ಅಣ್ಣಲೈ–ಸ್ವಾಮಿಯನ್ನು, ಮೇವಲ್–ಸಂಶ್ಲೇಷವನ್ನು ಪಡೆದು, ವಿಡಲಿಲ್–ಬಿಡಲಾರದ, ವಣ್‌ಕುರುಕೂರ್ ಶಡಕೋಪರ್–ಉದಾರಸ್ವಭಾವರಾದ ಶ್ರೀ ಶಠಾರಿ ಮುನಿವರ್ಯರ, ಶೊಲ್–ಸೂಕ್ತಿಯಾದ, ಕೆಡಲಿಲ್–ದೋಷರಹಿತವಾದ, ಆಯಿರತ್ತುಳ್ – ಸಹಸ್ರಪದ್ಯಮಾಲಿಯೊಳು, ಇವ್ವೈಪತ್ತುಮ್ – ಈ ದಶಕವು, ಕಿಳರ್‌ವಾರ್ಕ್ಕು–ಪಠನಮಾಡುವವರಿಗೆ, ಕೆಡಲಿಲ್–ಅವಿದ್ಯಾದಿ ದೋಷಗನ್ಧರಹಿತವಾದ, ವೀಡು–ಮೋಕ್ಷಾನನ್ದವನ್ನು, ಶೆಯ್ಯುಮ್–ಉಂಟುಮಾಡುವುದು.

( ಸ–ಗಾ–ರ || )—

ನಿತ್ಯಾಪೃಥಕ್‌ಸ್ಥಿತ–ಸುದರ್ಶನ–ನಾಯಕಂ ತಂ
ತ್ಯಕ್ತುಂ ನ ಹಿ ಕ್ಷಮ ಇತೀಹ ಶಠಾರಿಸೂರಿಃ |
ಸಾಹಸ್ರಮಾಹ ಪರಮಂ ಯದುದಾರಭಾವ–
ಸ್ತತ್ರೇದಮೇವ ದಶಕಂ ಪಠತಾಂ ಹಿ ಮುಕ್ತಿಃ ||

ತಾ|| ನಿತ್ಯವೂ ಹಸ್ತದಲ್ಲಿ ಚಕ್ರವನ್ನು ಧರಿಸಿರುವ ಸ್ವಾಮಿಯನ್ನು ಬಿಡಲಾರದೆ ಆಶ್ರಯಿಸಿ ನಿತ್ಯಸಂಶ್ಲೇಷವಂ ಪಡೆದ ಶ್ರೀ ಶಠಾರಿಮುನಿವರ್ಯರು ಅವನ ಸ್ತೋತ್ರರೂಪವಾಗಿ ರಚಿಸಿರುವ ನಿರ್ದೋಷವಾದ ಸಹಸ್ರಪದ್ಯಮಾಲಿಯೊಳು ಈ ದಶಕವನ್ನು ಪಠನಮಾಡುವವರು (ಅನಂತರವೇ) ಅವಿದ್ಯಾದಿ ದೋಷಗನ್ಧರಹಿತವಾದ ಮೋಕ್ಷಾನನ್ದವನ್ನು ಪಡೆದು ಕೃತಾರ್ಥರಾಗುವರು.

( ದ್ರು–ಉ–ಸಂ ॥ )—

ಮೋಕ್ಷಾದರಂ ಸ್ಫುಟಮವೇಕ್ಷ್ಯ ಮುನೇರ್ಮುಕುನ್ದೇ
ಮೋಕ್ಷಂ ಪ್ರದಾತುಮಸದೃಕ್ಷಫಲಂ ಪ್ರವೃತ್ತೇ ।
ಆತ್ಮೇಷ್ಟಮಸ್ಯ ಪದಕಿಙ್ಕರತೈಕರೂಪಂ
ಮೋಕ್ಷಾಖ್ಯವಸ್ತು ನವಮೇ ನಿರಣಾಯಿ ತೇನ.

( ದ್ರು–ಉ–ತಾ–ರ ॥ )—

ಶ್ರದ್ಧೇಯಸ್ವಾಂಘ್ರಿಯೋಗಂ ಶುಭಮತಿಕರದಂ ಸ್ತೋತ್ರಸಾಮರ್ಥ್ಯಹೇತುಂ
ಸ್ವಾರ್ಥೀಕಾರೋಪಕಾರಂ ಸ್ಮೃತಿರಸಶಮಿತಾನ್ಯಾದರಂ ಪ್ರೀತಿವಶ್ಯಮ್ ।
ಪ್ರಾಪ್ತಾಕಾಲಾಕ್ಷಮತ್ವಪ್ರದಮಮೃತರಸಧ್ಯಾನಮಾತ್ಮಾರ್ಪಣಾರ್ಹಂ
ವೈಮುಖ್ಯಾದ್ವಾರಯನ್ತಂ ವೃತಪರಿಚರಣಂ ಚಕ್ರಪಾಣಿಂ ಜಗಾದ ॥

(ಈ ನವಮ ದಶಕದ ಸಾರಾಂಶ —)

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು, ತಮಗೆ ಮೋಕ್ಷವನ್ನು ಕೊಡಲು ಉದ್ಯುಕ್ತನಾದ ಭಗವನ್ತನನ್ನು ನೋಡಿ—"ನಿನ್ನ ಪಾದಾರವಿನ್ದದಲ್ಲಿ ನಿತ್ಯಕೈಂಕರ್ಯವೇ ನನಗೆ ಅಪೇಕ್ಷಿತವಾದುದು. ಬೇರೊಂದು ಫಲವೂ ಅಪೇಕ್ಷಿತವಾದುದಲ್ಲ"—ಎಂದು ಕೈಂಕರ್ಯನಿಷ್ಕರ್ಷವಂ ಮಾಡಿ ಇರುತ್ತಾರೆ.

---

ಶ್ರೀಃ

# ದ್ವಿತೀಯಶತಕದಲ್ಲಿ—ದಶಮದಶಕ.

## (ಕಿಳರೊಳಿಯಿಳಮ್ಮೈ—)

(ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ಕೈಂಕರ್ಯಸಿದ್ಧಿಗೆ ತಿರುಮಾಲಿರುಂಶೋಲೈ ಮಲೈ ಎಂಬ ಶ್ರೀ ವನಗಿರಿಯ ಸ್ವಾಮಿಯಾದ ಸುನ್ದರಬಾಹು-ಅೞಕರ್-ಮ ೞರ್ಙೆಯ ಸಮಾಶ್ರಯಣವೇ ಆವಶ್ಯಕವೆಂದು ನಿರೂಪಿಸುತ್ತಾರೆ.)

---

(೧) ಕಿಳರೊಳಿಯಿಳಮ್ಮೈ ಕೆಡುವದನ್ ಮುನ್ನಮ್,
ವಳರೊಳಿ ಮಾಯೋನ್ ಮರುವಿಯ ಕೋಯಿಲ್,
ವಳರಿಳಮ್ ಪೊೞಿಲ್ ಶೂೞ್ ಮಾಲಿರುಂಶೋಲೈ,
ತಳರ್ವಿಲರಾಕಿಲ್ ಶಾರ್ವದು ಶದಿರೇ.

ಪ್ರ|| ಕಿಳರ್—ಪ್ರವರ್ಧಮಾನವಾದ, ಒಳಿ—ತೇಜಸ್ಸುಳ್ಳ, ಇಳಮ್ಮೈ—ಯೌವ್ವನವು, ಕೆಡುವ್ವದರ್ ಮುನ್ನಮ್—ನಾಶಹೊಂದುವುದಕ್ಕೆ ಮುಂಚೆ, ವಳರ್—ಬೆಳೆಯುತ್ತಿರುವ, ಒಳಿ—(ಗುಣೋತ್ಕರ್ಷಪ್ರಯುಕ್ತವಾದ) ಕಾನ್ತಿಯುಳ್ಳ, ಮಾಯೋನ್—ಆಶ್ಚರ್ಯಗುಣಚೇಷ್ಟಿತನಾದ ಸರ್ವೇಶ್ವರನು, ಮರುವಿಯ—ವಾಸ ಮಾಡುತ್ತಿರುವ, ಕೋಯಿಲ್—ದಿವ್ಯಕ್ಷೇತ್ರವಾಗಿ, ವಳರ್—ವೃದ್ಧಿಹೊಂದುತ್ತಿರುವ, ಇಳಮ್ ಪೊೞಿಲ್—ಎಳೇಗಿಡಗಳಿಂದ, ಶೂೞ್—ಪರಿವೃತವಾದ, ಮಾಲಿರುಂಶೋಲೈ—ತಿರುಮಾಲಿರುಂಶೋಲೈ ಪರ್ವತವನ್ನು, ತಳರ್ವು ಇಲರಾಕಿ (ಲ್)—ಆಯಾಸವಿಲ್ಲದಂತೆ, ಶಾರ್ವದೇ—ಆಶ್ರಯಿಸುವುದೇ, ಶದಿರ್—ಚಾತುರ್ಯವು (ಯುಕ್ತವು).

(ಸ-ಗಾ-ರ || )—

ಪ್ರಾಗ್ಯೌವನಸ್ಯ ವಿಲಯಾತ್ಪ್ರಚಿತೌಜಸಶ್ಶ್ರೀ-
ಮಾಯಾಚರಿತ್ರನತ ಏವ ಗೃಹಂ ಪ್ರಭೋರ್ನಃ |
ನಿತ್ಯಪ್ರವೃದ್ಧತರುಷಣ್ಡವೃತಂ ಸುಖಾಯ
ಶ್ರೀಮದ್ವನಾದ್ರಿತಲಮಾಶ್ರಯಿತುಂ ಹಿ ಯುಕ್ತಮ್ ||

ತಾ॥ ಯೌವನವಿರುವಾಗಲೇ ದಿವ್ಯಮಾಯಾಗುಣಚೇಷ್ಟಿತನಾದ ಸರ್ವೇಶ್ವರನ ದಿವ್ಯಕ್ಷೇತ್ರವಾದ ತಿರುಮಾಲಿರುಂಶೋಲೈಮಲೈ ಎಂಬ ಪರ್ವತ ಪ್ರದೇಶವನ್ನು ನಿರಾಯಾಸವಾಗಿ ಆಶ್ರಯಿಸೋಣವೇ ಯುಕ್ತವು. (ಇದೇ ಸ್ರಾಪ್ಯವಾದ ಪರಮಪುರುಷಾರ್ಥವೆಂದು ತಾತ್ಪರ್ಯ)

(೨) ಶದಿರಿಳಮಡವಾರ್ ತಾಳ್ಚಿಯೈ ಮದಿಯಾದು,
ಅದಿರ್ ಕುರಲ್ ಶಙ್ಗತ್ತಳಗರ್ ತಮ್ ಕೋಯಿಲ್,
ಮದಿತವಳ್‌ಕುಡುಮಿ ಮಾಲಿರುಂಶೋಲೈ,
ಪದಿಯದುವೇತ್ತಿ ಯೆೞುವದು ಪಯನೇ.

ಪ್ರ॥ ಶದಿರ್ -- ಚಾತುರ್ಯವುಳ್ಳ, ಇಳ ಮಡವಾರ್ -- ಯೌವನ ಸ್ತ್ರೀಯರ, ತಾಳ್ಚಿಯೈ- ವಿನಯಾದಿ ನಟನವನ್ನು, ಮದಿಯಾದು -- ಗಣನೆಮಾಡದೆ, ಅದಿರ್ ಕುರಲ್-ಮಹಾಧ್ವನಿಯನ್ನುಂಟುಮಾಡುವಂತೆ ಶಬ್ದಮಾಡುತ್ತಿರುವ, ಶಙ್ಗತ್ತು-- ಪಾಂಚಜನ್ಯವೆಂಬ ಶಂಖುವನ್ನು ಧರಿಸಿರುವ, ಅೞಕರ್ ತಮ್--ಅೞಕರೆಂಬ ಸುನ್ದರ ಬಾಹುಮೂರ್ತಿಯ, ಕೋಯಿಲ್-ದೇವಾಲಯಕ್ಷೇತ್ರವಾದ, ಮದಿತವೞ್ಕುಡುಮಿ-ಚಂದ್ರನು ಸೇರುತ್ತಿರುವ ಶಿಖರಪ್ರಾನ್ತವುಳ್ಳ, ಮಾಲಿರುಂಶೋಲೈ-ತಿರುಮಾಲಿರುಂ ಶೋಲೈ ಮಲೈ ಯೆಂಬ, ಪದಿ ಅದು--ದಿವ್ಯಕ್ಷೇತ್ರವನ್ನು, ಏತ್ತಿ--ಸ್ತೋತ್ರಮಾಡಿ, ಎೞುವದೇ-ಉಜ್ಜೀವಿತರಾಗುವುದೇ, ಪಯನ್-ಪುರುಷಾರ್ಥವು.

( ಸ-ಗಾ ರ ॥ )—

ಚಾತುರ್ಯಶಾಲಿತರುಣೀಜನವಶ್ಯತಾಂ ತು
ತ್ಯಕ್ತ್ವಾ ಮಹಾಧ್ವನಿವಿಭೂಷಿತ ಶಙ್ಖಪಾಣೇಃ ।
ಶ್ರೀರಮ್ಯಬಾಹುಭೃತ ಏವ ಗೃಹಂ ಸುಧಾಂಶೂ-
ತ್ತಂಸೋಲ್ಲಸದ್ವನಗಿರಿಸ್ಥಲಮೇವ ಶಸ್ಯಮ್ ॥

ತಾ॥ ಚಾತುರ್ಯವುಳ್ಳ ಯೌವನಸ್ತ್ರೀಯರ ವಿನಯಾದಿ ನಟನವನ್ನು ಗಣನೆ ಮಾಡದೆ ದಿವ್ಯಘೋಷವುಳ್ಳ ಶಂಖುವನ್ನು ಧರಿಸಿರುವ ಅೞಕರೆಂಬ ಸುನ್ದರಬಾಹು ಮೂರ್ತಿಯ ದಿವ್ಯಕ್ಷೇತ್ರವಾದ (ಪೂರ್ಣಚನ್ದ್ರಾಲಂಕೃತವಾದ) ತಿರುಮಾಲಿರುಂ ಶೋಲೈ ಮಲೈಯೆಂಬ ಪರ್ವತಪ್ರದೇಶವನ್ನು ಸ್ತೋತ್ರಮಾಡಿ ಉಜ್ಜೀವಿತರಾಗುವುದೇ ಪುರುಷಾರ್ಥವು

(೩) ಪಯನಲ್ಲ ಶೆಯ್ದು ಪಯನಿಲ್ಲೈ ನೆಞ್ಜೇ,
ಪುಯಲ್ ಮಳೈ ವಣ್ಣರ್ ಪುರಿನ್ದುರೈ ಕೋಯಿಲ್,
ಮಯಲ್‌ಮಿಕು ಪೊೞಿಲ್‌ಶೂೞ್ ಮಾಲಿರುಂಶೋಲೈ,
ಅಯನ್ಮಲೈ ಯಡೈವದೇ ಕರುಮಮೇ.

ಪ್ರ॥ ನೆಞ್ಜೇ–ಮನಸ್ಸೇ !, ಪಯನಲ್ಲ–ನಿಷ್ಪ್ರಯೋಜನವಾದ ಕಾರ್ಯಗಳನ್ನು, ಶೆಯ್ದು–ಮಾಡಿ, ಪಯನ್–ಫಲವು, ಇಲ್ಲೈ–ಇಲ್ಲ; ಪುಯಲ್ ಮಳೈ–ತುಂತುರು ರೂಪವಾದ ವರ್ಷವುಳ್ಳ ಕಾಳಮೇಘದಂತೆ, ವಣ್ಣರ್ – ವರ್ಣವುಳ್ಳ (ಸ್ವಭಾವವುಳ್ಳ=ಉದಾರನಾದ) ಭಗವನ್ತನು ಉರೈ–ನಿತ್ಯವಾಸಮಾಡುವ, ಕೋಯಿಲ್–ದಿವ್ಯಕ್ಷೇತ್ರವಾದ, ಮಯಲ್‌ಮಿಕು – ಸೌನ್ದರ್ಯಾತಿಶಯವುಳ್ಳ, ಪೊೞಿಲ್ – ವನಗಳಿಂದ, ಶೂೞ್ – ಪರಿವೃತವಾದ, ಮಾಲಿರುಂಶೋಲೈ – ತಿರುಮಾಲಿರುಂಶೋಲೈ ಪರ್ವತದ, ಅಯನ್‌ಮಲೈ–ಪಾರ್ಶ್ವದ ಬೆಟ್ಟವನ್ನು, ಅಡೈವದು ಅದುವೇ–ಆಶ್ರಯಿಸೋಣವೆಂಬುದೇ, ಕರುಮಮ್–(ನಮಗೆ) ಕರ್ತವ್ಯವು (ಸ್ವರೂಪಾನುರೂಪವು).

( ಸ–ಗಾ–ರ ॥ )—

ಕೃತ್ಯಂ ವೃಥೈವ ವಿತಥಂ ಕಿಲ ಚಿತ್ತ ! ವರ್ಷ–
ನ್ಮೇಘಾಯಿತಸ್ಯ ತು ಹರೇಃ ಪ್ರಿಯಸನ್ನಿಧಾನಮ್ ।
ಸಮ್ಮೋಹನೈಸ್ತರುಗಣೈಶ್ಚ ಸಮೀಪಶೈಲೇ
ರಮ್ಯಂ ಶುಭಂ ವನಗಿರೇಸ್ಸ್ಥಲಮಾಶ್ರಿತವ್ಯಮ್ ॥

ತಾ॥ ಎಲೈ ಮನಸ್ಸೇ! ನಿಷ್ಫಲವಾದ ಕಾರ್ಯಗಳನ್ನು ಮಾಡದೆ, ನೀಲಮೇಘಶ್ಯಾಮನಾಗಿ ಉದಾರಶೀಲನಾಗಿರುವ ಭಗವನ್ತನಿಗೆ ವಾಸಸ್ಥಲವಾದ ದಿವ್ಯಕ್ಷೇತ್ರರೂಪವಾದ, (ಸುನ್ದರವನಾಲಂಕೃತವಾದ) ತಿರುಮಾಲಿರುಂಶೋಲೈ ಪರ್ವತದ ಪಾರ್ಶ್ವದ ಬೆಟ್ಟವನ್ನು ಆಶ್ರಯಿಸಿದರೂ ಅದೇ ನಮಗೆ ಸ್ವರೂಪಾನುರೂಪವಾದ ಕೃತ್ಯವಾಗಿರುವುದು.

(೪) ಕರುಮವನ್ ಪಾಶಮ್ ಕೞಿತ್ತುೞನ್ಱುಯ್ಯವೇ,
ಪೆರುಮಲೈ ಯೆಡುತ್ತಾನ್ ಪೀಡುರೈ ಕೋಯಿಲ್,
ವರುಮೞೈ ತವೞುಮ್ ಮಾಲಿರುಂಶೋಲೈ,
ತಿರುಮಲೈಯದುವೇ ಯಡೈವದು ತಿಱಮೇ.

ಪ್ರ॥ ಕರುಮವರ್ ಪಾಶಮ್–ಕರ್ಮಗಳೆಂಬ ಬಲಿಷ್ಠವಾದ ಪಾಶಗಳನ್ನು, ಕಳ್ಳಿ ತ್ತು–ನಾಶಪಡಿಸಿ, ಉಯ್ಲ್ದು–ಕೈಂಕರ್ಯವಂಮಾಡಿ ಮಾಡಿ, ಉಯ್ಯಾವೇ–(ಚೇತನರು) ಉಜ್ಜೀವಿಸುವಂತೆ, ಪೆರುಮಲೈ–ಮಹಾಪರ್ವತವನ್ನು, ಎಡುತ್ತಾನ್–ಎತ್ತಿರಕ್ಷಿಸಿದ ಭಗವನ್ತನು, ಪೀಡು ಉರೈ – ತನ್ನ ಮಹಿಮೆಯೊಡನೆ ನಿತ್ಯವಾಸಮಾಡುವ, ಕೋಯಿಲ್–ದಿವ್ಯಕ್ಷೇತ್ರವಾದ, ವರುಮಳ್ಳೈ – ವರ್ಷಿಸುವ ಮೇಘಗಳು, ತವ ಳ್ವುಮ್–ಸ್ಪರ್ಶಿಸುತ್ತಿರುವ, ಮಾಲ್ ಇರುಮ್ – ಉನ್ನತವಾಗಿಯೂ ವಿಸ್ತೃತ ವಾಗಿಯೂ ಇರುವ, ಶೋಲೈ ವನಗಳುಳ್ಳ, ತಿರುಮಲೈ ಅದುವೇ–ಆ ಪರ್ವತವನ್ನೇ, ಅಡೈವದು–ಆಶ್ರಯಿಸೋಣವು, ತಿಱಮ್–ಶ್ರೇಷ್ಠವಾದ ಕಾರ್ಯವು.

( ಸ–ಗಾ–ರ ॥ ) —

ದುಷ್ಕರ್ಮಪಾಶಸರಣಿಂ ಜಗತಾಂ ನಿಹನ್ತುಂ
ತನ್ಮುಕ್ತಿಸಿದ್ಧಿವಿಧಯೇಽಪಿ ಮಹಾಚಲಂ ಯತ್ ।
ಸನ್ಧಾರಯನ್ ಹರಿರಿಹಾಸ್ತಿ ತರೂಪಗೂಢೇ
ಮೇಘಾವೃತೇ ವನಗಿರೌ ಗಿರಿರೇಷ ಸೇವ್ಯಃ ॥

ತಾ॥ ಬಲಿಷ್ಠವಾದ ಕರ್ಮಪಾಶಗಳನ್ನು ನಾಶಪಡಿಸಿ, ತನ್ನ ಕೈಂಕರ್ಯವನ್ನು ಮಾಡಿ ಚೇತನರು ಉಜ್ಜೀವಿಸುವಂತೆ (ಗೋವರ್ಧನ) ಪರ್ವತವನ್ನು ಎತ್ತಿ (ಗೋ ಗೋಪರನ್ನು) ರಕ್ಷಿಸಿದ ಭಗವನ್ತನ ನಿತ್ಯವಾಸಕ್ಷೇತ್ರವಾದ (ವಾರ್ಷುಕಮೇಘಾ ವೃತವಾದ) ತಿರುಮಾಲಿರುಂಶೋಲೈಪರ್ವತವನ್ನು ಆಶ್ರಯಿಸೋಣವೇ ಶ್ರೇಷ್ಠ ವಾದ ಕಾರ್ಯವು.

(೨೯) ತಿಱಮುಡೈ ವಲತ್ತಾಲ್ ತೀವಿನೈ ಪೆರುಕ್ಕಾದು,
ಅಱಮುಯಲಾಳಿ ಪ್ಪಡೈಯವನ್ ಕೋಯಿಲ್,
ಮಱುವಿಲ್ ವಣ್ಶುನೈಶೂೞ್ ಮಾಲಿರುಂಶೋಲೈ,
ಪುಱಮಲೈಶಾರ ಪ್ಪೋವದು ಕಿಱಿಯೇ.

ಪ್ರ॥ ತಿಱಮುಡೈ–ನಾನಾವಿಧವಾದ, ವಲತ್ತಾಲ್–ಬಲಗಳಿಂದ, ತೀವಿನೈ–ಮಹಾಪಾಪಗಳನ್ನು, ಪೆರುಕ್ಕಾದು–ವೃದ್ಧಿಮಾಡದಂತೆ, ಅಱಮ್–(ಆಶ್ರಿತರಕ್ಷಣ ವೆಂಬ) ಧರ್ಮದಲ್ಲಿ, ಮುಯಲ್–ಉದ್ಯುಕ್ತವಾದ, ಆೞಿ–ಚಕ್ರವನ್ನು, ಪಡೈಯವನ್–ಆಯುಧವಾಗಿ ಉಳ್ಳ ಸರ್ವೇಶ್ವರನ, ಕೋಯಿಲ್ – ವಾಸಕ್ಷೇತ್ರವಾದ, ಮಱು ವಿಲ್–ನಿಷ್ಕಳಂಕವಾದ, ವಣ್ – ಉದಾರವಾದ, ಶುನೈ – ಜಲಪ್ರವಾಹಗಳಿಂದ,

ಶೊ್ಲ್ಲ್‌-ಪರಿವೃತವಾದ, ಮಾಲಿರುಂಶೋಲ್ಯೈ-ತಿರುಮಾಲಿರುಂಶೋಲೈಪರ್ವತದ, ಪುಱಮಲೈ-ಪಕ್ಕದಬೆಟ್ಟವನ್ನು, ಶಾರಪ್ಪೋವದು-ಆಶ್ರಯಿಸೋಣವು, ಕಿಱಿಯೇ-ಒಳ್ಳೇ ಉಪಾಯವೇ ಸರಿ.

( ಸ-ಗಾ-ರ || )—

**ದುಷ್ಕೃತ್ಯನಾಶವಿಧಯೇ ಜಗತಾಂ ಬಲೈಸ್ತೈ-**
**ರ್ನಾನಾವಿಧೈರುಪಕರೋತಿ ಹಿ ಚಕ್ರಪಾಣಿಃ |**
**ತೇನೋಷಿತಸ್ಯ ಚ ವೃತಸ್ಯ ಶುಭೈಃ ಪ್ರವಾಹೈ-**
**ರ್ಬಾಹ್ಯಾಚಲೇ ವನಗಿರೇರ್ವಸತಿಶ್ಶರಣ್ಯಾ ||**

ತಾ|| ಸಕಲವಿಧವಾದ ಬಲಗಳಿಂದಲೂ ನಾವು ಪಾಪಗಳನ್ನು ಮಾಡದೆ, ಆಶ್ರಿತ ರಕ್ಷಣಧುರೀಣವಾದ ಚಕ್ರವನ್ನು ಧರಿಸಿರುವ ಭಗವನ್ತನ ವಾಸಕ್ಷೇತ್ರವಾದ (ನಿರ್ಮಲೋದಾರಸರಿತ್ಪರಿವೃತವಾದ) ತಿರುಮಾಲಿರುಂಶೋಲೈಪರ್ವತದ ಪಾರ್ಶ್ವದಲ್ಲಿರುವ ಬೆಟ್ಟವನ್ನು ಆಶ್ರಯಿಸೋಣವು ನಮಗೆ ಒಳ್ಳೇ ಉಜ್ಜೀವನೋಪಾಯವೆಂದು ಭಾವವು.

(೭) ಕಿಱಿಯೆನ ನಿನ್ಱೈಮಿನ್ ಕೀೞ್ಮೈ ಶೆಯ್ಯಾದೇ,
ಉಱಿಯಮರ್ ವೆಣ್ಣೆಯುಣ್ಡವನ್ ಕೋಯಿಲ್,
ಮಱಿಯೊಡು ಪಿಣೈಶೇರ್ ಮಾಲಿರುಂಶೋಲೈ,
ನೆಱಿಪಡವದುವೇ ನಿನೈವದು ನಲಮೇ.

ಪ್ರ|| ಕೀೞ್ಮೈ-(ವಿಷಯಾನ್ತರ ಪ್ರವೃತ್ತಿರೂಪವಾದ) ನೀಚಕೃತ್ಯವನ್ನು, ಶೆಯ್ಯಾದೇ-ಮಾಡದೆ, ಕಿಱಿ ಎನ-(ಇದೇ) ಒಳ್ಳೇಉಪಾಯವೆಂದು, ನಿನ್ಱೈಮಿನ್-ತಿಳಿದುಕೊಳ್ಳಿರಿ; (ಯಾವುದೆಂದರೆ) ಉಱಿ ಅಮರ್-ಉರಿಯಲ್ಲಿ ಸುರಕ್ಷಿತವಾಗಿ ಇಡಲ್ಪಟ್ಟ, ವೆಣ್ಣೆಯ್-ಬೆಣ್ಣೆಯನ್ನು, ಉಣ್ಡವನ್-ಭಕ್ಷಿಸಿದ ಕೃಷ್ಣನ, ಕೋಯಿಲ್-ವಾಸಕ್ಷೇತ್ರವಾದ, ಮಱಿಯೊಡು-ಕರುಗಳೊಡನೆ, ಪಿಣೈ-ಹೆಣ್ಣುಜಿಂಕೆಗಳು, ಶೇರ್-ಸೇರುವ ಮಾಲಿರುಂಶೋಲೈ-ತಿರುಮಾಲಿರುಂಶೋಲೈಪರ್ವತದ, ನೆಱಿ-ಮಾರ್ಗದಲ್ಲಿ, ಪಡ-ಸೇರಬೇಕೆಂಬ, ಅದುವೇ-ಅದನ್ನೇ, ನಿನೈವದು-ಸ್ಮರಿಸೋಣವು, ನಲಮ್-ಒಳ್ಳೇದು.

( ಸ-ಗಾ-ರ ॥ )—

ತ್ಯಕ್ತ್ವಾ ನಿಹೀನಮಪಿ ಕರ್ಮ ಶುಭಾಂ ಗತಿಂ ತಾಂ
ಸಞ್ಚಿನ್ತ್ಯ ಚಾತ್ರ ತು ಸವತ್ಸಮೃಗೀಸಮೇತಮ್ ।
ಶಿಕ್ಯೋಪರಿಸ್ಥನವನೀತಭುಜಸ್ಸ್ಥಲಂ ತತ್
ಸ್ಮರ್ತವ್ಯಂ ಚ ಸದ್ವನಗಿರೇಃ ಕುಶಲಂ ಶರಣ್ಯಮ್ ॥

ತಾ॥ ವಿಷಯಾನ್ತರಪ್ರವೃತ್ತಿರೂಪವಾದ ನೀಚಕೃತ್ಯವಂಮಾಡದೆ, ಇದೇ ಒಳ್ಳೇ ಉಪಾಯವೆಂದು ತಿಳಿಯಿರಿ. ಅದು ಯಾವುದೆಂದರೆ—ಉರಿಯಲ್ಲಿ ಸುರಕ್ಷಿತವಾಗಿಟ್ಟಿದ್ದ ಬೆಣ್ಣೆಯನ್ನು (ಚೌರ್ಯದಿಂದ) ಭಕ್ಷಿಸಿದ ಶ್ರೀಕೃಷ್ಣನ ವಾಸಕ್ಷೇತ್ರವಾದ ( ಸವತ್ಸಮೃಗೀಪರಿವೃತವಾದ ) ತಿರುಮಾಲಿರುಂಶೋಲೈಪರ್ವತದ ಮಾರ್ಗದಲ್ಲಿ ನಾವು ಸೇರಬೇಕೆಂಬ ಸ್ಮರಣವೇ—ಒಳ್ಳೇದೆಂದು ತಿಳಿಯಿರಿ.

(೭) ನಲಮೆನ ನಿನೈಮಿನ್ ನರಕಳ್ಳುನ್ದಾದೇ,
ನಿಲಮುನಮಿಡನ್ದಾನ್ನೀಡುಱೈ ಕೋಯಿಲ್,
ಮಲಮಱು ಮದಿಶೇರ್ ಮಾಲಿರುಂಶೋಲೈ,
ವಲಮುಱೈ ಯೆಯ್ದಿ ಮರುವುದಲ್ ವಲಮೇ.

ಪ್ರ॥ ನರಕು-ಸಂಸಾರವೆಂಬ ನರಕದಲ್ಲಿ, ಅೞುನ್ದಾದೇ – ಮಗ್ನರಾಗದೆ, ನಲಮ್ ಎನ – (ಇದೇ) ಪರಮಪ್ರಯೋಜನವೆಂದು, ನಿನೈಮಿನ್ – ಚಿನ್ತಿಸಿರಿ; ಮುನಮ್ – (ಪ್ರಳಯಾನನ್ತರದ) ಪೂರ್ವಕಾಲದಲ್ಲಿ, ನಿಲಮ್-ಭೂಮಿಯನ್ನು ಇಡನ್ದಾನ್-(ವರಾಹರೂಪಿಯಾಗಿ) ಕಿತ್ತು ಮೇಲಕ್ಕೆ ಎತ್ತಿದವನಾದ ಭಗವನ್ತನು, ನೀಡು ಉಱೈ-ನಿತ್ಯವಾಸಮಾಡುವ, ಕೋಯಿಲ್ - ದಿವ್ಯಕ್ಷೇತ್ರವಾದ, ಮಲಮ್ ಅಱು-(ಶಿಖರಗಳಲ್ಲಿ ಘರ್ಷಣದಿಂದ) ನಿಷ್ಕಳಂಕವಾದ, ಮದಿ-ಚನ್ದ್ರನು, ಶೇರ್-ಸೇರಿರುವ, ಮಾಲಿರುಂಶೋಲೈ – ತಿರುಮಾಲಿರುಂಶೋಲೈಪರ್ವತವನ್ನು, ಮುಱೈ ವಲಮ್ ಎಯ್ದಿ – ಸಮ್ಬನ್ಧದ ಅನುಕೂಲ್ಯವನ್ನು ಹೊಂದಿ, ಮರುವುದಲೇ-ಆಶ್ರಯಿಸೋಣವೇ, ವಲಮ್-ದೃಢವಾದ ಬಲವು.

( ಸ-ಗಾ-ರ ॥ )—

ಸಞ್ಚಿನ್ತ್ಯತಾಂ ಶುಭಮಿದಂ ನರಕಾಪನುತ್ತ್ಯೈ
ಪೂರ್ವಂ ಧರೋದ್ಧರಣಕೃದ್ವಸತೀಹ ಯಸ್ಮಾತ್ ।
ದಿವ್ಯಾಂ ಮತಿಂ ವಿತರತೀತಿ ಚ ಶೇಷಭಾವಾತ್
ಪ್ರಾಪ್ತುಂ ವನಾದ್ರಿಮುಚಿತಂ ತರುಷಣ್ಡರಮ್ಯಮ್ ॥

ತಾ॥ ಸಂಸಾರವೆಂಬ ನರಕಾಂಬುಧಿಯಲ್ಲಿ ಮಗ್ನರಾಗದೆ ನೀವೆಲ್ಲರೂ ಇದೇ ಪರಮಪ್ರಯೋಜನವೆಂದು ತಿಳಿಯಿರಿ. ಯಾವುದೆಂದರೆ—ಪೂರ್ವದಲ್ಲಿ ವರಾಹ ರೂಪಿಯಾಗಿ ಭೂಮಿಯನ್ನು ಮೇಲಕ್ಕೆ ಎತ್ತಿದ ಭಗವನ್ತನ ನಿತ್ಯವಾಸಕ್ಷೇತ್ರವಾದ (ನಿಷ್ಕಳಂಕ ಚನ್ದ್ರಾಲಂಕೃತಶಿಖರವಾದ) ತಿರುಮಾಲಿರುಂಶೋಲೈಮಲೈಪರ್ವತವನ್ನು ಆಶ್ರಯಿಸೋಣವೇ ದೃಢವಾದ ಬಲವೆಂದು ತಿಳಿಯಿರಿ.

(೮) ವಲಂ ಶೆಯ್ದು ವೈಕಲ್ ವಲವ್ ಕಳಿಯಾದೇ,
ವಲಂ ಶೆಯ್ಯುಮಾಯ ಮಾಯವರ್ ಕೋಯಿಲ್,
ವಲಂ ಶೆಯ್ಯುಮ್ ವಾನೋರ್ ಮಾಲಿರುಂಶೋಲೈ,
ವಲಂ ಶೆಯ್ದು ನಾಳುಮ್ ಮರುವುದಲ್ ವಳಕ್ಕೇ.

ಪ್ರ॥ ವಲಮ್-(ಶರೀರದ) ಬಲವನ್ನು, ಶೆಯ್ದು-ಉಂಟುಮಾಡಿ, ವೈಕಲ್-ಪ್ರತಿದಿನವೂ, ವಲಮ್ ಕಳಿಯಾದೇ - ಆ ಬಲವನ್ನು ನಾಶಪಡಿಸದೆ, ವಲಂ ಶೆಯ್ಯುಮ್-ಆನುಕೂಲ್ಯವನ್ನುಮಾಡುವ, ಆಯರ್-ಕೃಷ್ಣರೂಪಿಯಾದ, ಮಾಯವರ್-ಆಶ್ಚರ್ಯಗುಣಚೇಷ್ಟಿತನಾದ ಭಗವನ್ತನ, ಕೋಯಿಲ್ - ದಿವ್ಯಕ್ಷೇತ್ರವಾದ, ವಾನೋರ್-ನಿತ್ಯಸೂರಿಗಳು, ವಲಂ ಶೆಯ್ಯುಮ್-ಪ್ರದಕ್ಷಿಣಮಾಡುವ, ಮಾಲಿರುಂಶೋಲೈ - ತಿರುಮಾಲಿರುಂಶೋಲೈಮಲೈಯೆಂಬ ಪರ್ವತವನ್ನು, ವಲಂಶೆಯ್ದು - ಪ್ರದಕ್ಷಿಣಮಾಡಿ ಅನುಕೂಲವೃತ್ತಿಯಂ ಮಾಡಿ, ನಾಳುಮ್- ಪ್ರತಿದಿನವೂ, ಮರುವುದಲ್-ಹೊಂದಿ ಇರೋಣವು, ವಳಕ್ಕು-ನ್ಯಾಯವು.

( ಸ-ಗಾ-ರ ॥ ) —

**ಸಮ್ಪ್ರಾಪ್ಯ ಚಾಪಿ ಬಲಮತ್ರ ವೃಥೈವ ಕಾಲಂ**
**ನೇತುಂ ಹಿ ನೋಚಿತಮಹೋ! ಕುಶಲಾವಹಸ್ಯ ।**
**ಗೋಪಾಲಕಸ್ಯ ವಸತಿಸ್ಸುರಬೃನ್ದವನ್ದ್ಯಾ**
**ದಿವ್ಯಸ್ಥಲೀ ವನಗಿರೇಸ್ಸತತಂ ಹಿ ಸೇವ್ಯಾ ॥**

ತಾ॥ ಪ್ರಾಣಿಗಳಿಗೆ ಶರೀರದಲ್ಲಿ ಬಲವನ್ನು ಉಂಟುಮಾಡಿ ಅದನ್ನು ನಾಶಪಡಿಸದೆ ಪ್ರತಿದಿನವೂ ಪೋಷಿಸುತ್ತಿರುವ ಶ್ರೀಕೃಷ್ಣರೂಪಿಯಾದ ಭಗವನ್ತನ ದಿವ್ಯ

ಕ್ಷೇತ್ರವಾದ (ನಿತ್ಯಸೂರಿಸಂಸೇವ್ಯವಾದ) ತಿರುಮಾಲಿರುಂಶೋಲೈ ಪರ್ವತವನ್ನು ಪ್ರದಕ್ಷಿಣಮಾಡಿ ನಿತ್ಯವೂ ಸೇವಿಸೋಣವೇ ನ್ಯಾಯವು.

(೯) ವೞಕ್ಕೆನ ನಿನ್ನೈಮಿನ್ ವಲ್‍ವಿನೈ ಮೂೞ್‍ಕಾದು,

ಅೞಕ್ಕೊಡಿಯಟ್ಟಾನಮರ್ ಪೆರುಂ ಕೋಯಿಲ್,

ಮೞಕ್ಕಳಿಱ್ಱಿನಂ ಶೇರ್ ಮಾಲಿರುಂಶೋಲೈ,

ತೊೞಕ್ಕರುದುವದೇ ತುಣಿವದು ಶೂದೇ.

ಪ್ರ॥ ವಲ್‍ವಿನೈ–ಪ್ರಬಲವಾದ ಪಾಪಗಳಲ್ಲಿ, ಮೂೞ್‍ಕಾದು–ಮಗ್ನರಾಗದೆ, ವೞಕ್ಕು ಎನ–(ಇದು) ನಮಗೆ ಯುಕ್ತವೆಂದು, ನಿನ್ನೈಮಿನ್–ತಿಳಿದುಕೊಳ್ಳಿರಿ. ಅೞಕ್ಕೊಡಿ – (ಪೂತನೆಯೆಂಬ) ರಾಕ್ಷಸಸ್ತ್ರೀಯನ್ನು, ಅಟ್ಟಾನ್ – ಕೊಂದವನು (ಶ್ರೀ ಕೃಷ್ಣನು), ಅಮರ್–ಆಶ್ರಯಿಸಿರುವ, ಪೆರುಮ್ ಕೋಯಿಲ್–ಮಹಾಕ್ಷೇತ್ರವಾದ, ಮೞಕ್ಕಳಿಱು ಇನಮ್–ಚಿಕ್ಕ ಆನೆಗಳ ಸಮೂಹಗಳು, ಶೇರ್–ಸೇರುವ, ಮಾಲಿ ರುಂಶೋಲೈ–ತಿರುಮಾಲಿರುಂಶೋಲೈಪರ್ವತವನ್ನು, ತೊೞ – ಸೇವಿಸುವುದಕ್ಕೆ, ಕರುದುವದೇ–ಆಶೆಪಡುವುದರಲ್ಲಿ, ತುಣಿವದು–ಮುಂದಾಳಾಗಿರೋಣವೇ, ಶೂದೇ–ಸಂಸಾರವನ್ನು ಜಯಿಸುವುದಕ್ಕೆ ಕಾರಣವಾಗುವುದು.

(ಸ–ಗಾ–ರ॥)—

ಪ್ರಾಪ್ಯಂ ಸ್ವರೂಪಮಿತಿ ಚಿನ್ತಯತಾದ್ಯ ಪಾಪಾ–

ನ್ಯುಚ್ಛಿದ್ಯ ದುಷ್ಟವನಿತಾವಿನಿಹನ್ತುರೇತತ್ ।

ದಿವ್ಯಸ್ಥಲಂ ತರುಣವಾರಣಸೇವ್ಯಮಾಢ್ಯಂ

ಪ್ರಾಪ್ತುಂ ಚ ಸದ್ವನಗಿರೇಸ್ಸ್ಮರಣಂ ಶರಣ್ಯಮ್ ॥

ತಾ॥ ಪ್ರಬಲವಾದ ಪಾಪಾಮ್ಬುಧಿಯಲ್ಲಿ ಮಗ್ನರಾಗದೆ ಇದೇ ನಮಗೆ ಯುಕ್ತವೆಂದು ನೀವು ತಿಳಿಯಿರಿ. ಯಾವುದೆಂದರೆ— ಪೂತನಾಮರ್ದನವಂ ಮಾಡಿದ ಶ್ರೀಕೃಷ್ಣನ ವಾಸಕ್ಷೇತ್ರವಾದ (ತರುಣವಾರಣಸೇವ್ಯವಾದ) ತಿರುಮಾಲಿರುಂಶೋಲೈಮಲೈ ಎಂಬ ಶ್ರೀ ವನಗಿರಿಪ್ರದೇಶವನ್ನು ಭಜಿಸಬೇಕೆಂಬ ಕುತೂಹಲವೇ ಸಂಸಾರಜಯಕ್ಕೆ ಮೂಲವೆಂದು ತಿಳಿಯಿರಿ.

(೧೦) ಶೂದೆಸ್ತು ಕಳವುಂ ಶೂದುಂ ಶೆಯ್ಯಾದೇ,

ವೆ ದಮುಂಕ್ ವಿರಿತ್ತಾನ್ ವಿರುಮ್ಬಿಯ ಕೋಯಿಲ್,

ಮಾದುಃಉ ಮಯಿಲ್ ಶೇರ್ ಮಾಲಿರುಂಶೋಲೈ,

ಪೋದವಿಳ್ ಮ ಲೈಂರೇ ಪುಕುವದು ಪೊರುಳೇ.

ಪ್ರ॥ ಶೂದು ಎನ್ರು – ಅರ್ಥಸಿದ್ಧಿಗೆಕಾರಣವೆಂದು, ಕಳವುಮ್ – ಚೌರ್ಯ ವನ್ನೂ, ಶೂದುಮ್ – ಬಲಾತ್ಕಾರದಿಂದ ಅಪಹರಿಸೋಣವನ್ನೂ, ಶೆಯ್ಯಾದೇ – ಮಾಡದೆ, ಮುನ್–ಪೂರ್ವಕಾಲದಲ್ಲಿ, ವೇದಮ್–ವೇದಾರ್ಥವನ್ನು, ವಿರಿತ್ತಾನ್– (ಗೀತಾದಿರೂಪದಿಂದ) ವಿವರಿಸಿದ ಭಗವನ್ತನು, ವಿರುಮ್ಬಿಯ–ಆಶೆಯೊಡನೆ ವಾಸ ಮಾಡುವ, ಕೋಯಿಲ್–ಕ್ಷೇತ್ರವಾದ, ಮಾದಃಉಱು – ಮಾರ್ದವದ ಅತಿಶಯ ವುಳ್ಳ, ಮಯಿಲ್–ನವಿಲುಗಳು, ಶೇರ್–ಸೇರಿ ವಾಸಮಾಡುವ, ಇರುಮಾಲ್–ಅತಿ ವಿಶಾಲವಾದ, ಶೋಲೈ–ವನಗಳಲ್ಲಿ, ಪೋದು–ಪುಷ್ಪಗಳು, ಅವಿಳ್–ವಿಕಾಸವನ್ನು ಹೊಂದುವ, ಮಲೈ–ಪರ್ವತದಲ್ಲಿ, ಪುಕುವದೇ–ಪ್ರವೇಶಿಸುವುದೇ, ಪೊರುಳ್–ಪುರು ಷಾರ್ಥವಾದುದು.

( ಸ–ಗಾ–ರ ॥ )—

ದ್ರವ್ಯಾರ್ಜನಾಯ ವಿವಿಧಂ ಚ ವಿಹಾಯ ಚೌರ್ಯಂ

ವೇದಾರ್ಥವಕ್ತುರಿಹ ಸನ್ನಿಧಿಮಚ್ಯುತಸ್ಯ ।

ಬರ್ಹಿಪ್ರಿಯ ಂ ವಿಕಚಸೂನಮಿದಂ ವನಾದ್ರೇ-

ಸ್ಸ್ಥಾನಂ ಪ್ರವೇಷ್ಟುಮುಚಿತಂ ಪುರುಷಾರ್ಥರೂಪಮ್ ॥

ತಾ॥ ದ್ರವ್ಯಾರ್ಜನಕ್ಕೆ ಸಾಧನವೆಂದು ಚೌರ್ಯಾದಿಕೃತ್ಯಗಳನ್ನು ಮಾಡದೆ, ನೀವುಗಳೆಲ್ಲರೂ ಗೀತಾದಿರೂಪವಾದ ವೇದಾರ್ಥಗಳ ವಿಶದೀಕರಣವಂಮಾಡಿದ ಭಗವನ್ತನ ವಾಸಕ್ಷೇತ್ರವಾದ (ರಮಣೀಯ ಮಯೂರಕುಲಸಂಶ್ರಿತವಾದ) ವಿಶಾಲ ವನಗಳುಳ್ಳ ಶ್ರೀ ವನಗಿರಿಪ್ರದೇಶದಲ್ಲಿ ಪ್ರವೇಶಿಸಿದರೆ ಅದೇ ನಿಮಗೆ ಪುರುಷಾರ್ಥವು —ಎಂದು ಭಾವವು.

(೧೧) ಪೊರುಳ್ ನ್ನಿವ್ವುಲಕಮ್ ಪಡೈತ್ತವನ್ ಪುಕಳ್ ಮೇಲ್,
ಮರುಳಿಲ್ ವಣ್ ಕುರುಕೂರ್ ವಣ್ ಶಡಕೋಪನ್,
ತೆರುಳ್ ಕೊಳ್ಳ ಚೊನ್ನ ವೋರಾಯಿರತ್ತುಳಿಪ್ಪತ್ತು,
ಅರುಳುಡೈಯವನ್ ತಾಳಣೈವಿಕ್ಕುಮ್ ಮುಡಿತ್ತೇ.

ಪ್ರ॥ ಪೊರುಳ್ ಎನ್ರು–ಪ್ರಯೋಜನವುಂಟೆಂದು, ಇವ್ವುಲಕುಮ್ ಪಡೈತ್ತವನ್–ಈ ಲೋಕವನ್ನು ಸೃಷ್ಟಿಸಿದ ಭಗವನ್ತನ, ಪುಕಳ್ಮೇಲ್–ಕಲ್ಯಾಣಗುಣಗಳ ವಿಷಯದಲ್ಲಿ, ಮರುಳ್ ಇಲ್ – ಅಜ್ಞಾನವಿಲ್ಲದ, ವಣ್ ಕುರುಕೂರ್–ಸುನ್ದರವಾದ ಕುರುಕಾಪುರಿಯ, ವಣ್ ಶಡಕೋಪನ್–ಉದಾರಹೃದಯರಾದ ಶ್ರೀ ಶಠಾರಿಯು, ತೆರುಳ್ ಕೊಳ್ಳ – ಚೇತನರಿಗೆ ದಿವ್ಯಜ್ಞಾನವುಂಟಾಗುವಂತೆ, ಚೊನ್ನ – ಹೇಳಿದ (ರಚಿಸಿದ), ಓರ್–ಅದ್ವಿತೀಯವಾದ, ಆಯಿರತ್ತುಳ್–ಸಹಸ್ರಪದ್ಯಮಾಲಿಯೊಳು, ಇಪ್ಪತ್ತು–ಈ ದಶಕವು, ಮುಡಿತ್ತು–ಸಂಸಾರಬನ್ಧವನ್ನು ನಾಶಪಡಿಸಿ, ಅರುಳುಡೈಯವನ್–ಕೃಪಾನಿಧಿಯಾದ ಸುನ್ದರಬಾಹುಮೂರ್ತಿಯ, ತಾಳ್ – ಪಾದಗಳನ್ನು, ಅಣೈವಿಕ್ಕುಮ್–ಸೇರುವಂತೆ ಮಾಡುವುದು.

( ಸ–ಗಾ–ರ ॥ )—

ಭೂಯಾಚ್ಚ ಸಾರ್ಥಕಮಿತಿ ಸ್ವಯಮೇವ ಲೋಕ–
ಸೃಷ್ಟುರ್ಹರೇಸ್ಸಕಲದಿವ್ಯಗುಣಾನ್ ವಿಶುದ್ಧಾನ್ ।
ಸ್ತೋತುಂ ಶಠಾರಿರವದಚ್ಚ ಸಹಸ್ರಮೇತ–
ದ್ದಿವ್ಯಂ ಕೃಪಾಳುಚರಣೌ ದಶಕಂ ನಯೇದ್ವಃ ॥

ತಾ॥ ಸಾರ್ಥಕವಾಗುವುದೆಂದು ಲೋಕಸೃಷ್ಟಿಯಂ ಮಾಡಿದ ಭಗವನ್ತನ ಕಲ್ಯಾಣಗುಣಗಳ ಸ್ತೋತ್ರವಂ ಮಾಡುವುದಕ್ಕಾಗಿ ಅಜ್ಞಾನಗನ್ಧರಹಿತರಾದ (ದಿವ್ಯಜ್ಞಾನಪರಿಪೂರ್ಣರಾದ) ಶ್ರೀ ಕುರುಕಾಪುರೀ ನಿರ್ವಾಹಕರಾದ ಶಠಾರಿ ಮುನಿವರ್ಯರು ರಚಿಸಿದ ದಿವ್ಯವಾದ ಸಹಸ್ರಪದ್ಯಮಾಲಿಯೊಳು, ಈ ದಶಕವು ಸಂಸಾರಪಾಶವಂ ನಾಶಪಡಿಸಿ, ಕೃಪಾನಿಧಿಯಾದ ಸುನ್ದರಬಾಹು (ಅ೦ಕರ್) ಮೂರ್ತಿಯ ಪಾದಾರವಿಂದಗಳನ್ನು ಸೇರುವಂತೆ ಮಾಡುವುದು.

---

( ದ್ರ-ಉ-ಸಂ || )—

ಏತಸ್ಮಿಞ್ಚಾರ್ಥಿತಮಿಹೈವ ಹರಿಃ ಪ್ರದಾತು-
ಮಾಸೇದಿವಾನ್ ವನಮಹೀಧರಮಿತ್ಯವೇಕ್ಷ್ಯ!
ಪ್ರಾಪ್ಯಂ ತಮೇವ ಚ ತದನ್ವಯಿನಂ ಚ ಸರ್ವಂ
ಪ್ರಾಚೀಕಶತ್ಸ ದಶಮೇ ದಶಕೇ ಮುನೀನ್ದ್ರಃ ||

( ದ್ರ-ಉ-ತಾ-ರ || )—

ದೀಪ್ತ್ಯಾಶ್ಚರ್ಯಸ್ವಭಾವಂ ಮುಖರಿತಜಲಜಂ ವರ್ಷುಕಾಮ್ಭೋದವರ್ಣಂ
ಶೈಲಚ್ಛತ್ರಾಭಿಗುಪ್ತಾಶ್ರಿತಮತಿವಿಲಸದ್ಧೇತಿಮಾಪೀತಗವ್ಯಮ್ |
ಸಂರಮ್ಭೋತ್ಕ್ಷಿಪ್ತಭೂಮಿಂ ಪ್ರಣಮದನುಗುಣಂ ಪೂತನಾಚೇತನಾನ್ತಂ
ಪೂರ್ವಾಚಾರ್ಯಂ ಶ್ರುತೀನಾಂ ಶುಭಸವಿಧಗಿರಿಸ್ಥಾಸತೋ ನಿರ್ವಿವೇಶ ||

ಇತ್ಯಪ್ರಾಪ್ತ್ಯಸಹ್ಯಕ್ಷಣವಿರಹತಯಾ ಮಾನುಷತ್ವೇ ಪರತ್ವಾತ್
ಸರ್ವಾಸ್ವಾದತ್ವಭೂಮ್ನಾ ವ್ಯಸನಹರತಯಾ ಸ್ವಾಪ್ತಿಸಂಪ್ರೀತಿಮತ್ತ್ವಾತ್|
ವೈಮುಖ್ಯತ್ರಾಸಯೋಗಾನ್ನಿಜಸುಹೃದವನಾನ್ಮುಕ್ತಿಸಾರಸ್ಯದಾನಾತ್
ಕೈಂಕರ್ಯೋದ್ದೇಶ್ಯಭಾವಾಚ್ಛುಭನಿಲಯತಯಾ ಚಾತಿಭೋಗ್ಯಂ ದ್ವಿತೀಯೇ||

---

(ಈ ದಶಮದಶಕದ ಸಾರಾಂಶ) —

ಈ ಹತ ನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಇಷ್ಟಾರ್ಥವನ್ನು ಕೊಡಲು ಭಗವನ್ತನು ತಿರುಮಾಲಿರುಂಶೋಲೈ ಎಂಬ ಶ್ರೀವನಗಿರಿಕ್ಷೇತ್ರದಲ್ಲಿ ಸುನ್ದರಬಾಹುರೂಪಿಯಾಗಿ ನಿತ್ಯವಾಸವಂಮಾಡುತ್ತಿದಾನೆಂದುತಿಳಿದು, ಈ ಕ್ಷೇತ್ರವನ್ನೂ ಇದಕ್ಕೆ ಸಮ್ಬನ್ಧಪಟ್ಟ ಪರ್ವತಾದಿಪ್ರದೇಶಗಳನ್ನೂ ಸೇವಿಸೋಣವೇ ಪರಮಪುರುಷಾರ್ಥವೆಂದು ಸರ್ವರಿಗೂ ಉಪದೇಶಮಾಡಿರುತ್ತಾರೆ.

---

(ಈ ದ್ವಿತೀಯಶತಕದ ಸಾರಾಂಶ)—

ಈ ದ್ವಿತೀಯಶತಕದಲ್ಲಿ—(೧) ಭಗವನ್ತನ ವಿಶ್ಲೇಷದಲ್ಲಿ ಕ್ಲೇಶವೂ, (೨) ಅವನ ಉತ್ತುಂಗಲಲಿತತ್ವವೂ, (೩) ಭೋಗ್ಯತಾತಿಶಯವೂ, (೪) ಆರ್ತಿನಾಶನದಿಂದ ರಕ್ಷಕತ್ವವೂ, (೫) ಸೌನ್ದರ್ಯಾತಿಶಯವೂ, (೬) ಭಕ್ತವಿಶ್ಲೇಷಭೀರುತ್ವವೂ, (೭) ಭಕ್ತಸನ್ತಾನ ಪರಮ್ಪರಾರಕ್ಷಣವೂ, (೮) ಮೋಕ್ಷಪ್ರದತ್ವವೂ, (೯) ಮೋಕ್ಷದಲ್ಲಿ ಮುಕ್ತನಿಗೆ ಉಂಟಾಗುವ ನಿತ್ಯಕೈಂಕರ್ಯರೂಪವಾದ ಪಾರತನ್ತ್ರ್ಯವೂ, (೧೦)

ಭಗವನ್ತನಿಗೆ ಅಸಾಧಾರಣವಾದ ಶ್ರೀವನಗಿರಿಯೆಂಬ ಕ್ಷೇತ್ರದಲ್ಲಿ ಭೋಗ ಸಾನಿಧ್ಯವೂ—ಕ್ರಮೇಣ ೧೦ ದಶಕಗಳಲ್ಲಿಯೂ ಪ್ರತಿಪಾದಿತವಾಗಿವೆ.

**ಈ ಪ್ರಕಾರ ಈ ದ್ವಿತೀಯಶತಕದಲ್ಲಿ ಭಗವನ್ತನ ನಿರತಿಶಯ ಭೋಗ್ಯತೆಯು ಪ್ರತಿಪಾದಿತವಾಗಿದೆ.**

---

ಶ್ರೀಮದ್ಯಾದವಶೈಲಶೃಂಗರವಿಣಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೀಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ದ್ವಿತೀಯ ಮತುಲಂ ಗಾಥಾಸಹಸ್ರೇ ಮುನೇಃ ||

---

ಸಹಸ್ರಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ಮಯಾ ಕೃತಾ ।
ಗೈರ್ವಾಣೀ ಶತಕಂ ತತ್ರ ದ್ವಿತೀಯಂ ವಿವೃತಂ ಶುಭಮ್ ||

---

ಮಮ ಶ್ರೀಕಲ್ಕಿಸಿಂಹಸ್ಯ ಭಕ್ತ್ಯಾ ಭಗವತೋ ಹರೇಃ ।
ಶಠಾರಿವತ್ಸ್ವಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ||

ಇಂತು ಶ್ರೀಶಠಾರಿಮುನಿವರ್ಯವಿರಚಿತವಾದ

ತಿರುವಾಯ್ಮೊಳಿಎಂಬ

ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ-ದ್ರಾವಿಡದಿವ್ಯಪ್ರಬನ್ಧದ

**ಲಲಿತಸರಣಿಯೆಂಬ ಕರ್ಣಾಟಭಾಷಾಟೀಕೆಯೊಳ್**

ದ್ವಿತೀಯಶತಕದ ವ್ಯಾಖ್ಯಾನವು ಇಲ್ಲಿಗೆ

ಸಂಪೂರ್ಣವಾಗಿದೆ.

---

ಶ್ರೀಮತೇ ಶಠಕೋಪಾಯ ನಮಃ

ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ

---

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.